ಆರ್.ಎಂ.ಬ್ಯಾಲಂಟೈನ

# ಗ್ಯಾಸ್ಕೋಯಿನ





ಅನುವಾದಕ

ಆನಂದ

K 831
B 35 G

ಪ್ರಕಾಶಕರು
ಶ್ರೀರಾಮಚಂದ್ರ ಬುಕ ಡಿಪೋ

ಆರ್. ಎಂ. ಬ್ಯಾಲಂಟೈನ್

# ಗ್ಯಾಸ್ಕೋಯಿನ್

ಅನುವಾದಕ :

ಆನಂದ

ಮಾರಾಟಗಾರರು

ಶ್ರೀ ರಾಮಚಂದ್ರ ಬುಕ್ ಡಿಪೋ

ಮೈಸೂರು

ಯಾವನು

**ಆ ನಂ ದ**

ಎಂಬ

ನಿಜವಾದ ಹೆಸರಿನಿಂದ,

ಕಳ್ಳಹೆಸರಿನ ನಾನೇ ಎಂದು

ಸುಳ್ಳು ಸೋಗು ಹಾಕುತ್ತಿದ್ದಾನೋ

ಆ ಪಿಳ್ಳೆ

ಹನ್ನೆರಡು ವರ್ಷಗಳ

ನನ್ನ

ಪ್ರತಿಬಿಂಬನಿಗೆ

ಪ್ರೀತಿಯಿಂದ.

# ಮುನ್ನುಡಿ

ಇಂಗ್ಲಿಷ್ ಸಾಹಿತ್ಯದಲ್ಲಿ ಬಾಲಕರ ಮನರಂಜನೆಗಾಗಿ ಮನೋಜ್ಞ ವಾದ ಸಾಹಸ ಕಥೆಗಳನ್ನು ಬರೆದಿರುವವರಲ್ಲಿ, ರಾಬರ್ಟ್ ಮೈಖೇಲ್ ಬ್ಯಾಲಂಟೈನ್ ಬಹಳ ಪ್ರಖ್ಯಾತನಾಗಿದ್ದಾನೆ. ಅವನು ಬರೆದ Coral Island (ಹವಳ ದ್ವೀಪ) ಎಂಬ ಕಥೆ ಬಹಳ ಜನಪ್ರಿಯವಾಗಿದೆ. ಇದು, ಕನ್ನಡಿಗರಿಗೆ ಸುಪರಿಚಿತರಾಗಿರುವ ಶ್ರೀ ಎ. ಎನ್. ಮೂರ್ತಿ ರಾಯರಿಂದ ಈಗಾಗಲೇ ಕನ್ನಡಕ್ಕೆ ತರ್ಜಮೆಯಾಗಿ ಬಹುವಾಗಿ ಮನ್ನಣೆ ಪಡೆದಿದೆ. ಬ್ಯಾಲಂಟೈನನ, ಇದರಷ್ಟೇ ಮನೋಹರವಾದ— ಸಾಹಸಮಯವಾದ, ಇನ್ನೊಂದು ಕಥೆ, Gascoyne, The Sandal Wood Trader— ಎಂಬುದು. ಇದು ಈ ಕಥೆಯ ಕನ್ನಡ ಭಾಷಾಂತರ. ಕನ್ನಡದಲ್ಲಿ ಬಾಲಕರಿಗಾಗಿ ರಚಿತವಾದ ಸಾಹಿತ್ಯ ಇನ್ನೂ ಶೈಶವಾ ವಸ್ಥೆಯಲ್ಲೇ ಇದೆ ಎನ್ನಬಹುದು. ಅದರ ಬೆಳೆವಣಿಗೆಗೆ ಈ ಚಿಕ್ಕ ಭಾಷಾಂತರ, ಸ್ವಲ್ಪಮಟ್ಟಿಗಾದರೂ ಸಹಾಯಕವಾದರೆ, ಇದನ್ನು ಮಾಡಿಸಿದ, ಮಾಡಿದ ಹಾಗು ಅಚ್ಚುಮಾಡಿದವರ ಶ್ರಮ ಸಾರ್ಥಕ ವಾಯಿತೆಂದು ಭಾವಿಸುತ್ತೇನೆ.

೨೮೩೪, ಚಾಮುಂಡೀ ಪುರ

ಮೈಸೂರು

೨೯–೬–೧೯೫೧

ಆನಂದ

# ವಿಷಯ ಕ್ರಮ

ಗಂಧದ ಮರದ ವರ್ತಕ

# ಗ್ರಾಸ್ಕೋಯಿನ್

೧

## ಸ್ಕೂನರ* ಮೇಲೆ

ಪೆಸಿಫಿಕ್ ಮಹಾಸಾಗರವೇ ನಮ್ಮ ಈ ಕಥೆಯ ರಂಗಸ್ಥಳ. ಬಹು ವರ್ಷಗಳ ಹಿಂದಿನ ಮಾತು ಒಂದು ದಿನ ಬೆಳಗಿನಹೊತ್ತು ಬಹಳ ಮನೋಹರವಾಗಿತ್ತು. ಸಮುದ್ರ, ಹೆಸರಿಗೆ ತಕ್ಕಂತೆ, ಬಹಳ ಶಾಂತವಾಗಿ ಸುಖವಾಗಿ ನಿದ್ದೆಮಾಡುತ್ತಿದ್ದಂತೆ ಕಾಣುತ್ತಿತ್ತು. ಅದರ ಎದೆಯ ಮೇಲೆ ಒಂದು ಸ್ಕೂನರು ಹಗುರವಾಗಿ ತೇಲುತ್ತ ಗಂಭೀರ ಗಮದಿಂದ ಹೋಗುತ್ತಿತ್ತು. ಹಡಗು ಸಣ್ಣದಾದರೂ ಅಚ್ಚುಕಟ್ಟಾಗಿ ನೋಡುವುದಕ್ಕೆ ಅಂದವಾಗಿತ್ತು.

ವಾಸ್ತವವಾಗಿ, ಈ ಸಮಯದಲ್ಲಿ ಪ್ರಶಾಂತವಾದ ಸಮುದ್ರದ ಮೇಲೆ ಹಡಗು ನಿಶ್ಚಲವಾಗಿತ್ತು ಮೇಲೆ, ಮೋಡದ ಸುಳುವೂ ಇಲ್ಲದ, ತಿಳಿಯಾದ ಆಕಾಶ; ಕೆಳಗೆ ಅದಕ್ಕೆ ಕನ್ನಡಿ ಹಿಡಿದಂತೆ— ನುಣುಪಾದ ಸಮುದ್ರದ ನೀರಿನ ಮೈ ; ಅದರಲ್ಲಿ ಸ್ಫುಟವಾಗಿ ಕಾಣುತ್ತಿದ್ದ ಹಡಗಿನ ಪ್ರತಿಬಿಂಬ. ಗಾಳಿ ನಿಶ್ಚಲವಾಗಿದ್ದದ್ದರಿಂದ ಹಡಗಿನ ಪಟಗಳೆಲ್ಲ ಕುಗ್ಗಿ ಜೋತುಬಿದ್ದಿದ್ದವು. ಸೂರ್ಯ ಆಕಾಶದಲ್ಲಿ ಏರುತ್ತ ಏರುತ್ತ ಬಿಸಿಲಿನ ಕಾವು ಹೆಚ್ಚುತ್ತಿತ್ತು.

ಕಾವಲುಗಾರ ಒಬ್ಬ ಹೊರತು, ಹಡಗಿನ ಇತರ ನಾವಿಕರೆಲ್ಲ ಅದರ ಕೆಳಗಿನ ಒಳಭಾಗದಲ್ಲೋ ಅಥವಾ ಅದರ ಮೇಲಟ್ಟದಲ್ಲೋ ಮಲಗಿ ನಿದ್ರೆಮಾಡುತ್ತಿದ್ದರು.

* Schooner ಎರಡು ಸ್ತಂಭಗಳ, ಬಹು ವೇಗವಾಗಿ ಹೋಗುವ ಕಿರಿದಾದ ಪಟ ನೌಕೆ.

ಮೇಲಟ್ಟದಲ್ಲಿ ಮಲಗಿದ್ದವರ ಪೈಕಿ ಒಬ್ಬನ ವಿಷಯ ಇಲ್ಲಿ ಸ್ವಲ್ಪ ವಿವರವಾಗಿ ಹೇಳಬೇಕು.

ಅವನ ಹೆಸರು ಜಾನ್ ಬಂಪಸ್. ಆಜಾನುಬಾಹುವಾದ ಆಸಾಮಿ; ನೋಡುವುದರಲ್ಲಿ ಅತಿ ಬಲಿಷ್ಠನಾಗಿ ತೋರುತ್ತಿದ್ದ. ಕೂದಲಿಂದ ತುಂಬಿದ ಒರಟಾದ ಅವನ ಮೈಕಟ್ಟನ್ನು ನೋಡಿದರೆ, ಯಾರಿಗಾದರೂ, ಅವನನ್ನು ಕೊಲ್ಲುವುದು ಮಹಾಕಷ್ಟ ಎನ್ನಿಸುತ್ತಿತ್ತು. ಅವನ ತಲೆ ಕೂದಲು ಕೆಂಚಗೂ ಪೊದೆಯಾಗಿಯೂ ಇತ್ತು. ಮನುಷ್ಯ ಗೌರವರ್ಣದವನಾಗಿದ್ದರೂ, ಅವನ ಮುಂದೋಳು, ಕೈ, ಮುಖ, ಇಷ್ಟು ಮಾತ್ರ ಬಿಸಿಲಿನ ಹೊಡೆತಕ್ಕೆ ಅಚ್ಚ ಕಂದು ವರ್ಣಕ್ಕೆ ತಿರುಗಿದ್ದವು. ಮುಖ ಒರಟಾಗಿದ್ದರೂ ಅದರಲ್ಲಿ ಯಾವಾಗಲೂ ಒಳ್ಳೆಯ ಸ್ವಭಾವ, ಸಂತೋಷ ಎದ್ದು ಕಾಣುತ್ತಿದ್ದವು.

ಇದ್ದಕ್ಕಿದ್ದ ಹಾಗೆಯೇ ಸ್ವಲ್ಪ ಗಾಳಿ ಎದ್ದು, ಹಡಗು ಒಂದು ಕಡೆಗೆ ಸ್ವಲ್ಪ ಬಾಗಿತು. ಇದರಿಂದ, ತೂಗು ಬಿದ್ದಿದ್ದ ಒಂದು ದಪ್ಪನಾದ ಹಗ್ಗ, ಅದರ ಕೆಳಗೇ ಮಲಗಿದ್ದ ಬಂಪಸಿನ ಮುಖದ ಮೇಲೆ ಹರಿಯಿತು. ಅವನಿಗೆ ಎಚ್ಚರವಾಗಿ ಕಣ್ಣುಬಿಟ್ಟ. ಇದೇ ಕ್ಷಣದಲ್ಲಿ, "ಹಗ್ಗ ಬಿಚ್ಚಿ! ದಿಮ್ಮಿ ಅಡ್ಡಮಾಡಿ!—ಪಟ ಏರಿಸಿ!" ಎನ್ನುವ ಅಪ್ಪಣೆ ಮಾತುಗಳು,. ಪೂರ್ಣವಾಗಿ, ಗುಡುಗಿನಂತೆ ಗಭೀರವಾಗಿ ಮಂದ್ರ ಸ್ವರದಲ್ಲಿ ಕೇಳಿಬಂತು.

ಅಪ್ಪಣೆ ಮಾತುಗಳು ನಿಂತದ್ದೇ ತಡ, ಅಂಥಾ ಸ್ಥೂಲ ಕಾಯದ ಜಾನ್ ಬಂಪಸ್, ನಂಬಲಸಾಧ್ಯವಾದ ಚುರುಕಿನಿಂದ ಚಿಗಿದು ಎದ್ದು, ಇತರರೊಡನೆ ಸೇರಿ ಕೆಲಸಕ್ಕೆ ಕೈಹಾಕಿದ. ಒಂದೆರಡು ಕ್ಷಣಗಳಲ್ಲೇ ಏರಿಸಲ್ಪಟ್ಟ ಪಟಗಳು ಗಾಳಿಗೆ ಉಬ್ಬಿ, ಹಡಗು ಚಲಿಸತೊಡಗಿತು. ಬರಬರುತ್ತ ಅದರ ಗತಿ ವೇಗವಾಗಿ, ಕತ್ತಿಯಂತೆ ಸಮುದ್ರದ ನೀಲಿ ಮೈಯನ್ನು ಸೀಳುತ್ತ, ಹಿಂದೆ ನೊರೆಯ ಜಾಡನ್ನೆಬ್ಬಿಸುತ್ತ, ಹೊರಟಿತು. ಪೆಸಿಫಿಕ್ ಸಾಗರದ ತುಂಬ, ಅಲ್ಲಲ್ಲಿ, ಅನೇಕ ಹವಳದ್ವೀಪಗಳಿವೆ. ನಮ್ಮ ಹಡಗು ಅಂಥಾ ಒಂದು ದ್ವೀಪವನ್ನು ಕುರಿತು ಹೋಗುತ್ತಿತ್ತು. ಸ್ವಲ್ಪ ಹೊತ್ತಿನಲ್ಲೇ ಅದು, ತನ್ನ ಗುರಿಯಾಗಿದ್ದ

ದ್ವೀಪದ ಸುತ್ತ, ನೀರಿನ ಮಟ್ಟಕ್ಕೆ ಇದ್ದ, ಹವಳದ ಗೂಡುಗಳಿಂದಾದ ಕಟ್ಟೆಯ ಸಾಲನ್ನು ಸಮೀಪಿಸಿ, ಅದರಲ್ಲಿ ಒಂದು ಕಡೆ ಓಣಿಯಂತೆ ಇದ್ದ ಸಣ್ಣ ತೆರವಿನಲ್ಲಿ ಪ್ರವೇಶಿಸಿ, ಒಳವಲಯಕ್ಕೆ ಹೋಯಿತು. ದ್ವೀಪದ ಕರೆಗೂ-ಸ್ವಲ್ಪದೂರದಲ್ಲಿ ಅದನ್ನು ಸುತ್ತುಗಟ್ಟಿ ಇದ್ದ ಹವಳದ ಕಟ್ಟೆಯ ಸಾಲಿಗೂ ನಡುವೆ, ನೀರು ನಿಶ್ಚಲವಾಗಿತ್ತು. ಇನ್ನು ಸ್ವಲ್ಪಹೊತ್ತಿನಲ್ಲಿ, ಹಡಗು ಈ ನೀರನ್ನು ದಾಟಿ, ಒಂದು ಸಣ್ಣಕೊಲ್ಲಿಯನ್ನು ಪ್ರವೇಶಿಸಿತು. ಇಲ್ಲಿಯೂ ನೀರು ಸ್ತಬ್ಧವಾಗಿತ್ತು. ಅದರಲ್ಲಿ, ಉದ್ದವಾದ ತೀರದ ಮರಳಿನ ಅಂಚೂ, ಅದರ ಉದ್ದಕ್ಕೂ ಬೆಳೆದಿದ್ದ ತಾಳೆ ಮತ್ತು ಉಷ್ಣವಲಯದ ಇತರ ಗಿಡಮರಗಳೂ, ದ್ವೀಪದ ಒಳಭಾಗದಲ್ಲಿ ಎದ್ದುಹಬ್ಬಿ—ನೇರಿಳೆ ವರ್ಣದಿಂದ ರಂಜಿಸುತ್ತಿದ್ದ—ಗುಡ್ಡ ಬೆಟ್ಟಗಳ ಸಾಲೂ, ಪ್ರತಿಬಿಂಬಿತವಾಗಿದ್ದವು. ಹಡಗು, ಈ ಕೊಲ್ಲಿಯಲ್ಲಿ ತೀರದಿಂದ ಸ್ವಲ್ಪದೂರವಾಗಿ, ಸುಮಾರು ಆರು ಮಾರುಗಳಷ್ಟು ಆಳದ ನೀರಿನಲ್ಲಿ ಲಂಗರು ಬಿಟ್ಟಿತು.

---

## ೨

## ವಿಫಲವಾದ ಕೊಲೆಪ್ರಯತ್ನ

ಇಲ್ಲಿ ಪಾಠಕರು, ಹಡಗಿನ ಕ್ಯಾಪ್ಟನ್* ಪರಿಚಯ ಸ್ವಲ್ಪ ಮಾಡಿಕೊಳ್ಳಬೇಕು. ಎತ್ತರದಲ್ಲೂ-ಶಕ್ತಿಯಲ್ಲೂ, ಈ ವ್ಯಕ್ತಿ ಅಸಾಧಾರಣ ಪುರುಷನಾಗಿದ್ದ. ಅವನ ಮುಖ, ದರ್ಪ-ಗರ್ವ-ಆತ್ಮವಿಶ್ವಾಸಗಳನ್ನು ಸಾರುತ್ತಿತ್ತು. ಈ ಮೊದಲೇ ಅವನ ಧ್ವನಿಯ ವಿಷಯ ಒಂದು ಮಾತು ಬಂದಿದೆ. ಗುಡುಗಿನಂತೆ ಗಂಭೀರವಾದ ಅವನ ಕಂಠಧ್ವನಿಗೆ, ಕೇಳಿದವರ ಗಮನವನ್ನು ಹಿಡಿದು ನಿಲ್ಲಿಸುವ ಅಪೂರ್ವ ಆಕರ್ಷಣ ಶಕ್ತಿಯಿತ್ತು. ಅಲ್ಲದೆ, ಎಂತಹ ವಿಷಮಪರಿಸ್ಥಿತಿಯಲ್ಲೂ ಸ್ಥೈರ್ಯಗೆಡದ ಇವನ ಘರ್ಜನೆ

* Captain ಹಡಗಿನ ಮುಖ್ಯಾಧಿಕಾರಿ.

ಅಪ್ಪಟ ಪುಕ್ಕರನ್ನೂ ಹುರಿದುಂಬಿಸಿ, ಅವರಲ್ಲಿ ಧೈರ್ಯವನ್ನೂ ನೆಮ್ಮದಿಯನ್ನೂ ಉಂಟುಮಾಡುತ್ತಿತ್ತು. ತೇಜಸ್ವಿಯಾದ ಇವನ ಮುಖದಲ್ಲಿ ಸೌಂದರ್ಯಕ್ಕಿಂತ ಪೌರುಷವೇ ಹೆಚ್ಚಾಗಿ ಕಾಣುತ್ತಿತ್ತು. ಇವನ ತಲೆ ಕೂದಲು ಕಪ್ಪಗೆ, ಮೊಟಕಾಗಿ, ಗುಂಗುರು ಗುಂಗುರಾಗಿತು. ಮೇಲು ತುಟಿಯನ್ನಲಂಕರಿಸಿದ್ದ ಕುಡಿಮೀಸೆ ಹೊರತು, ಮುಖದ ಉಳಿದ ಭಾಗವೆಲ್ಲ ಬೋಳಾಗಿ ನುಣ್ಣಗಿತ್ತು. ಆದ್ದರಿಂದ ಅವನ ತುಂಬುಗಲ್ಲವೂ-ಬಲವಾದ ದವಡೆಗಳೂ ಚೆನ್ನಾಗಿ ಕಾಣುತ್ತಿದ್ದವು. ಅವನ ಹೊಳಪಾದ ನೀಲವರ್ಣದ ಕಣ್ಣುಗಳು, ಸಮಯ ಬಂದರೆ ಕೆಂಡವನ್ನು ಕಾರಬಲ್ಲವಾಗಿದ್ದವು-ಅಥವಾ ಚಂದ್ರನ ಕಿರಣಗಳಂತೆ ಕೋಮಲತಮವಾಗ ಬಲ್ಲವಾಗಿದ್ದವು ಒಟ್ಟಿನಲ್ಲಿ, ಯಾವ ಕಾರ್ಯಕ್ಷೇತ್ರದಲ್ಲೇ ಆಗಲಿ ಮುಂದಾಳುತ್ವವನ್ನೂ-ಉಚ್ಚಸ್ಥಾನವನ್ನೂ ಗಳಿಸಬಲ್ಲಂಥ ವ್ಯಕ್ತಿತ್ವವನ್ನು ಹೊಂದಿದ್ದ.

ಕ್ಯಾಪ್ಟನ್ ಧರಿಸಿದ್ದ ಉಡುಪಿನ ವರ್ಣ ಒಟ್ಟಾಗಿ ಮಬ್ಬು—ಮಾಸಲು; ಆದರೂ ಒಂದು ರೀತಿಯಲ್ಲಿ ವಿಚಿತ್ರವಾಗಿ ಆಕರ್ಷಣೀಯವಾಗಿತ್ತು. ಕಪ್ಪುವರ್ಣದ ಉಣ್ಣೆಬಟ್ಟೆಯ ಷರಟನ್ನೂ ಷರಾಯನ್ನೂ ಹಾಕಿಕೊಂಡಿದ್ದ. ತನ್ನ ಕಸಬಿಗೆ ಅಸಂಬದ್ಧವಾಗಿ, ಮೊಣಕಾಲನಿಂದ ಕೆಳಗೆ ಷರಾಯಿತೋಳುಗಳನ್ನು ಮುದುರಿ, ಅವುಗಳ ಮೇಲೆ ಮಾಸಲು ವರ್ಣದ ಪಟ್ಟಿಯನ್ನು ಸುತ್ತಿದ್ದ. ಇವನ ಒಟ್ಟು ವೇಷದಲ್ಲಿ ಸ್ವಲ್ಪ ಮಟ್ಟಿಗೆ ಎದ್ದು ಕಾಣುತ್ತಿದ್ದುದೆಂದರೆ,—ಸೊಂಟದ ಸುತ್ತ ಇದ್ದ ಕೆಂಪು ಪಟ್ಟಿ. ಕಂದುಬಣ್ಣದ ಚರ್ಮದ ಒರೆಯಿಂದ ಕೂಡಿದ ಒಂದು ಉದ್ದವಾದ ಚಾಕು ಅಥವಾ ಬಾಕು, ಒಂದು ಪಕ್ಕದಲ್ಲಿ ಈ ಪಟ್ಟಿಯಿಂದ ತೂಗಾಡುತ್ತಿತ್ತು. ಹಗುರವಾದ ಮೋಜಗಳನ್ನು ಮೆಟ್ಟಿದ್ದ. ಇವನ ತಲೆಯ ಮೇಲೆ, ಸ್ವಲ್ಪ ಓರೆಯಾಗಿ, ಒಂದು ಸಣ್ಣ, ದುಂಡಾದ ಬುಟ್ಟಿಯಂಥ ತೋಪಿ ಇತ್ತು. ಇವನ ವಯಸ್ಸು ಸುಮಾರು ನಲವತ್ತುವರ್ಷಗಳು.

ಸ್ವಲ್ಪ ಅನುಮಾನಾಸ್ಪದವಾಗಿ ಕಾಣುತ್ತಿದ್ದ ಹಡಗಿನ ಈ ನಾಯಕನ ಆಕೃತಿ-ಭಾವಭಂಗಿ-ವೇಷ ನೋಡಿದರೆ, ಆಸಾಮಿ, ಅತ್ಯುತ್ತಮ ಕಾರ್ಯಗಳನ್ನೇ ಆಗಲಿ, ಅತಿ ನೀಚ ಕೆಲಸಗಳನ್ನೇ ಆಗಲಿ

ಸಾಧಿಸುವುದರಲ್ಲಿ, ಅದ್ವಿತೀಯ ಸಾಮರ್ಥ್ಯವನ್ನು ಪಡೆದಿದ್ದಂತೆ ತೋರುತ್ತಿತ್ತು.

ಹಡಗು ಲಂಗರು ಬಿಟ್ಟಕೂಡಲೆ, ಕ್ಯಾಪ್ಟನ್ ಸಣ್ಣ ದೋಣಿ ಯೊಂದನ್ನು ನೀರಿನಲ್ಲಿಳಿಸುವಂತೆ ಅಪ್ಪಣೆ ಮಾಡಿದ. ನಾವಿಕರು ದೋಣಿಯನ್ನು ಇಳಿಸಿದರು. ಕೂಡಲೆ ಇವನು ಇಬ್ಬರು ನಾವಿಕ ರೊಡನೆ ಆ ದೋಣಿಗೆ ಇಳಿದ. ಈ ಇಬ್ಬರಲ್ಲಿ ಮೊದಲೇ ಪರಿಚಿತ ನಾದ ನಮ್ಮ ಸ್ನೇಹಿತ ಜಾನ್‌ಬಂಪಸ್ ಒಬ್ಬ. ಅವನು ದೋಣಿಯ ಹಿಂತುದಿಯಲ್ಲಿ ಹುಟ್ಟುಹಾಕುತ್ತ ಕುಳಿತಿದ್ದ. ಆದರ ಮುಂತುದಿ ಯಲ್ಲಿ, ಇನ್ನೊಬ್ಬ ನಾವಿಕ, ಅದೇ ಕೆಲಸ ಮಾಡುತ್ತ ಕುಳಿತಿದ್ದ ಕ್ಯಾಪ್ಟನ್ ದೋಣಿಯ ಮಧ್ಯ ಭಾಗದಲ್ಲಿದ್ದ. ಈ ಮೂರು ಮಂದಿ ಇದ್ದ ದೋಣಿ, ದ್ವೀಪದ ತೀರಾಭಿಮುಖವಾಗಿ ಹೋಗುತ್ತಿತ್ತು. ಈ ಸಮಯದಲ್ಲಿ ಕ್ಯಾಪ್ಟನ್,

"ನಿನ್ನ ಸ್ವಂತ ಬಟ್ಟೆ-ಬರೆ-ಸಾಮಾನುಗಳನ್ನ ಜೊತೇಲಿ ತಂದಿ ದ್ದೀಯಾ—ಜಾನ್?"—ಎಂದು ಕೇಳಿದ. ಒರಟು ಮೈಕಟ್ಟಿನ ನಾವಿಕ-ನಮ್ಮ ಮಿತ್ರ ಜಾರ್ಜ ಬಂಪಸ್ ಮಹಾಶಯ, ನಿಧಾನವಾಗಿ, ಹತ್ತಿ ನೂಲಿನ ಕೆಂಪುವರ್ಣದ ತುಂಡು ಬಟ್ಟೆಯಲ್ಲಿ ಕಟ್ಟಿದ್ದ ಒಂದು ಪುಟ್ಟ ಗಂಟನ್ನು ಎತ್ತಿ ತೋರಿಸುತ್ತ—

"ಹೂಂ, ಸ್ವಲ್ಪ ತಂದಿದೇನೆ ಧಣಿಗಳೇ....ತೀರದ ಮೇಲೆ ಬಹಳ ಕಾಲ ಇರೊಲ್ಲಾಂತ ನನ್ನ ಮನಸ್ಸಿಗೆ ಅನ್ನಿಸ್ತಾ ಇದೆ-ಸರಿಯೆ?"—

ಎಂದು ಉತ್ತರವನ್ನು ಹೇಳಿ, ಪ್ರಶ್ನೆಯನ್ನು ಕೇಳಿದ.

"ಬಹಳ ಕಾಲವೇ ಆಗುತ್ತೆ—ನಿನಗೆ!—ನನ್ನ ಗೆಣೆಯ! ಪುನಃ ನಿನ್ನನ್ನ ಈ ಹಡಗಿನ ಮೇಲೆ ಬರಗೊಡಲ್ಲ. ತಿಳೀತೇನಣ್ಣಾ!"

"ಏನು?—ನನ್ನ-ಪುನಃ—ಹಡಗಿನ ಮೇಲೆ ಬ-ರ-ಗೊ-ಡೋ-ದಿ-ಲ್ಲ!"—

—ಎಂದು, ಕ್ಯಾಪ್ಟನ್ನಿನ ಕಡೆಯ ಮಾತುಗಳನ್ನು ಗಟ್ಟಿಯಾಗಿ ಪುನಶ್ಚರಣೆ ಮಾಡಿದ, ನಾವಿಕ ಶಿಖಾಮಣಿ ಬಂಪಸ್. ಅವನ ಮುಖ ದಲ್ಲಿ ಮೊದಲು ಆಶ್ಚರ್ಯ ಮೂಡಿತು; ಕೂಡಲೆ ಅದು ಮಾಯವಾಗಿ,

ಕೋಪದಿಂದ ಅವನ ಹುಬ್ಬುಗಳು ಗಂಟಿಕ್ಕಿದವು; ಅನಂತರ ನಿಧಾನವಾಗಿ ಸಡಿಲಗೊಂಡವು. ಅಗಲವಾಗಿ ಹಲ್ಲು ಕಿರಿಯುತ್ತ ಜಾನ್ ಬಂಪಸ್ ಮಾತು ಮುಂದರಿಸಿದ:

"ಯಾಕೆ ಕಾಪ್ಟಿಂಗ್*? ನನ್ನ ಏನು ಮಾಡೋಣಾಂತ ಇದೀರಿ? ನೋಡಿ, ನಾನು ಸೊಲ್ಪಾ ತೂಕವಾದ ಸರಕು–ಕಾಣುತ್ತೋ! ನಾನೂ ಸೊಲ್ಪಾ ಹ್ಞೂ—ಅಂತ ಹೇಳದೇ ಇದ್ರೆ—ನನ್ನ ಜರಗಿಸೋದು ಅಷ್ಟು ಸಲೀಸಲ್ಲ—ತಿಳೀರಿ!"

ಜೋ* ಬಂಪಸ್ (ಇದು ಅವನಿಗೆ ಪ್ರಿಯವಾಗಿದ್ದ ಅವನ ಹೆಸರಿನ ರೂಪ) ಆಡಿದ ಈ ಮಾತುಗಳಲ್ಲಿ—ಸ್ವಲ್ಪ ಹಾಸ್ಯ—ಗಾಂಭೀರ್ಯ–ಬೇಕಾದಷ್ಟು ಕಟುವ್ಯಂಗ್ಯ, ಬೆರೆತಿದ್ದವು. ತನ್ನ ಜೊತೆ ನಾವಿಕರಿಗಿದ್ದ ಕಟ್ಟು ನಿಯಮಗಳಿಗೆ ತೀರ ಹೊರತಾದ ಮನುಷ್ಯನಾಗಿದ್ದ ನಮ್ಮ ಜೋ ಬಂಪಸ್. ಇವನಿಗೆ ತನ್ನ ನಾಯಕನನ್ನು ಕಂಡರೆ ಸ್ವಲ್ಪವೂ ಭಯವಿರಲಿಲ್ಲ; ಗೌರವವಂತೂ ಇರಲೇ ಇಲ್ಲ! ಜೋ–ನ ಕಡೇ ಮಾತುಗಳಿಗೆ ಉತ್ತರವಾಗಿ ಕ್ಯಾಪ್ಟನ್ ಹೇಳಿದ:

"ನೋಡು—ಬಂಪಸ್, ನೀನು ನಿನ್ನ ಸ್ವಂತ ಒಪ್ಪಿಗೆಮೇಲೆ ನನ್ನಬಳಿ ಕೆಲಸಕ್ಕೆ ಸ್ಸೇರಿದೆ. ಆದ್ದರಿಂದ, ನಿನಗೆ ಬೇಕಾದಾಗ ಅದೇ ಒಪ್ಪಿಗೆಯಿಂದ ನೀನು ಕೆಲಸ ಬಿಟ್ಟು ಹೋಗಬಹುದು. ಆದರೆ, ನಾನು ಮತ್ತೆ ನಿನ್ನ ಕರೆದು, ಈ ಹಡಗಿನ ಮೇಲೆ ಕೆಲಸಕ್ಕೆ ಸೇರಿಸಿಕೊಳ್ಳೋದಿಲ್ಲ. ಈ ಮಾತು ಚೆನ್ನಾಗಿ ಜ್ಞಾಪಕದಲ್ಲಿಟ್ಟುಕೋ—ಅಲ್ಲಿ—ಹಡಗಿನಲ್ಲಿದ್ದರೆ—ನಿನ್ನ ಒಪ್ಪಿಗೆ ಇದ್ದರೂ, ಇಲ್ಲದೇ ಇದ್ದರೂ, ಎಲ್ಲೂ ಹೋಗಲಾರೆ. ಪುನಃ ಸಮುದ್ರದ ಮೇಲೆ ಹೋಗೋ ಹಟ ಇದ್ದರೆ, ಅದು ನಿನ್ನ ಇಷ್ಟ. ಈಜೋದಕ್ಕೆ ಸೊಗಸಾದ ಒಂದು ಜೊತೆ ಕಾಲುಗಳಿವೆ; ಅವಕ್ಕೆ ತಕ್ಕ ಒಂದು ಜೊತೆ ತೋಳುಗಳಿವೆ! ನಿನಗೆ ತೋರಿದಹಾಗೆ ಮಾಡಬಹುದು. ಅಲ್ಲದೆ—"

---

* Capting ಬಂಪಸನ ಬಾಯಲ್ಲಿ Captain ಅನ್ನೋದರ ಅಪಭ್ರಂಶ.

* Jo. John ಅನ್ನೋದರ ಹ್ರಸ್ವರೂಪ.

—(ಎಂದು ಇದುವರೆಗೂ ಮಾತಿನಲ್ಲಿದ್ದ ವಕ್ರ-ವ್ಯಂಗ್ಯಸರಣಿಯನ್ನು ಬದಲಾಯಿಸಿ, ಸ್ವಲ್ಪ ಅಸಡ್ಡೆ ಸಾತ್ವಿಕತೆಗಳನ್ನೇ ಮುಂದು ಮಾಡಿ)—

"—ಅಲ್ಲದೆ, ಬಂಪಸ್, ಈಗ ಸ್ವಲ್ಪಹೊತ್ತಿಗೆ ಮುಂಚೆ—ನೀನು ಏನೋ ಹಾಡು ಹೇಳುತ್ತಿದ್ದ ಹಾಗೆ ಕೇಳಿಸಿತು. ಸಾಕು–ಸಮುದ್ರ–ನಮಸ್ಕಾರಾಂತ—ಏನೋ ಸ್ವಲ್ಪ ಬೇಸರವಾಗಿ ಹೇಳುತ್ತಾ ಇದ್ದ ಹಾಗಿತ್ತು. ಆದ್ದರಿಂದ, ಈಗ ನೀನು, ಬದಲಾವಣೆಗಾಗಿ–ತೀರದಮೇಲೆ, ಅದರಲ್ಲೂ ಇಂಥ ಸೊಗಸಾದ ದ್ವೀಪದಲ್ಲಿ, ಸ್ವಲ್ಪಕಾಲ ಸಂತೋಷವಾಗಿ ಕಳೆಯೋಕೆ ಆಕ್ಷೇಪಿಸಲಾರೆ—ಅಂತ ಊಹಿಸೋಕೆ ಆಸ್ಪದ ಇದೆ.''

" ಕಾಪ್ಟಿಂಗ್, ನಾನು ನಿಮ್ಮ ಮನುಷ್ಯ !''—

—ಎಂದು ಸ್ವಲ್ಪ ಜೋರಾಗಿ ಒತ್ತಿಹೇಳಿದ ಬಂಪಸ್; ಹೇಳುತ್ತ ಮಾತಿನ ಜೋರನ್ನು ಹುಟ್ಟಿನ ಮೇಲೂ ತೋರಿಸಿ, ಬಲವಾಗಿ ಒಂದು ಸಲ ಎಳೆದ. ಇದರಿಂದ ದೋಣಿ ಇದ್ದಲ್ಲೇ ಒಂದು ಸುತ್ತುಹಾಕುವ ಹಾಗಾಯಿತು ! ಜೋ ಮಾತು ಮುಂದರಿಸುತ್ತ :

" ನಿಜ ಹೇಳು ಅಂದರೆ, ಕಾಪ್ಟಿಂಗ್, ನಿಮ್ಮ ಹಡಗಿನಮೇಲೆ ಕೆಲಸಕ್ಕೆ ಬಂದೆ ಅಂತ ನನಗೆ ವ್ಯಸನ ಏನೂ ಇಲ್ಲ. ಹಡಗೇನೋ ಚಿಕ್ಕದಾಗಿದ್ದರೂ ಬಹಳ ಚೆನ್ನಾಗಿದೆ—ಅಚ್ಚುಗಟ್ಟಾಗಿದೆ. ಆದರೆ ಅದರಲ್ಲಿ ಕೆಲಸಕ್ಕಿರೋ ನಾವಿಕರ ವಿಚಾರ ಬೇರೆ—ಅಂದರೆ—"

—ಎಂದು, ಕುಳಿತಹಾಗೆಯೇ, ತಿರುಗಿ, ಭುಜದಮೇಲೆ ನೋಡುತ್ತ, ದೋಣಿಯ ಮುಂತುದಿಯಲ್ಲಿ ಕುಳಿತು ಹುಟ್ಟುಹಾಕುತ್ತಿದ್ದ ಸಿಡುಕುಮೋರೆಯ ಇನ್ನೊಬ್ಬನಾವಿಕನನ್ನುದ್ದೇಶಿಸಿ,

"—ಅಂದರೆ ಡಿಕ್, ನಿನ್ನೊಬ್ಬನ ಹೊರತು—ಉಳಿದೋರ ವಿಚಾರ ಇದೆಯಲ್ಲ–ಅದು ಹೊಗಳೋ ಅಂಥಾ ಮಾತೇನಲ್ಲ. ನಾನೂ ಕೇಡಿಗರು ಎಷ್ಟೋಜನಾನ ನೋಡಿದೀನಿ—ಈ ವಯಸ್ಸಿಗೆ; ಆದರೆ ಇವರು ಅವರನ್ನೆಲ್ಲ ಮೀರಿಸಿದ ಮಹಾ ಕೇಡಿಗರು ! ಕಾಪ್ಟಿಂಗ್, ನೀವು ಗಂಧದ ಮರದ ವ್ಯಾಪಾರ ಮಾಡೋರೂಂತ ನನಗೆ ಗೊತ್ತಿಲ್ಲದೇ

ಇದ್ದರೆ—ನಿಜವಾಗಲೂ-ನೀವು ಒಬ್ಬ ಭಾರಿ ಸಮುದ್ರಗಳ್ಳ ಅಂತಾನೇ ನಂಬಿಬಿಡುತಿದ್ದೆ!''

—ಎಂದ. ಕ್ಯಾಪ್ಟನ್ ಮುಖ ಸ್ವಲ್ಪ ಗಂಟುಮಾಡಿಕೊಂಡು, "ಜೋ, ನಿನ್ನ ಜೊತೆಗಾರರ ವಿಚಾರ, ಅವರ ಬೆನ್ನಹಿಂದೆ ಹೀಗೆ ಕೆಟ್ಟಮಾತು ಆಡಬಾರದು. ಒಳ್ಳೆ ಸಾಚಾ ಮನುಷ್ಯ ಇಂಥಾ ಕೆಟ್ಟ ಕೆಲಸ ಎಂದಿಗೂ ಮಾಡೋದಿಲ್ಲ"—

—ಎಂದ. ಈ ಮಾತುಗಳನ್ನು ಕೇಳಿ ಬಂಪಸಿಗೆ ನಾಚಿಕೆಯಾಯಿತು. "ಇಲ್ಲ-ಇಲ್ಲ ಕಾಪ್ಟಿಂಗ್, ನಾನೂ ಹಾಗೆ ಮಾಡೋನಲ್ಲ-ಎಂದಿಗೂ ಮಾಡೋನಲ್ಲ! ಅವರೇನಾದರೂ ಇಲ್ಲೇ ಇದ್ದಿದ್ದರೆ-ಅವರ ಮುಸುಡಿಮೇಲೇ ನೇರವಾಗಿ ಎಸೀತಾ ಇದ್ದೆ—ಈ ಮಾತುಗಳನ್ನ! ಗುಂಪಿಗೆ ಗುಂಪೇ ಅಂಥಾ ಹೊಲಸು ಠಕ್ಕರು!-ಫಟಿಂಗರು! "ಅಬ್ಬಬ್ಬಾ! ನಾನೆಂದೂ—''

—ಎಂದು ಬಂಪಸ್ ಮಾತು ಮುಗಿಸುವಷ್ಟರಲ್ಲೆ ಕ್ಯಾಪ್ಟನ್ ಇದ್ದಕ್ಕಿದ್ದ ಹಾಗೆಯೇ—

"ಮುಚ್ಚು ಬಾಯಿ!-ಸಾಕು!"-ಎಂದು ಸಿಡಿಲಿದ. ಅನಂತರ ಬಂಪಸ್‌ನ ಮುಖವನ್ನೇ ನೇರವಾಗಿ ದಿಟ್ಟಿಸಿ ನೋಡುತ್ತ, ತನ್ನ ಗಂಭೀರವಾದ ದನಿಯಲ್ಲೇ ಅತಿ ಮೃದುವಾಗಿ,—

"ಎಳಿಯಣ್ಣಾ, ಎಳಿ!—ಎಳಿ!"

—ಎಂದ. ಹೀಗೆ ಮಾರ್ಪಟ್ಟು ಅಪ್ಪಣೆ ಮಾಡಿದ ದನಿಯಲ್ಲಿ-ಮತ್ತು ಅದಕ್ಕೆ ಬೆಂಬಲವಾದ ನೋಟದಲ್ಲಿ, ಜಾನ್ ಬಂಪಸ್‌ನಂಥವನನ್ನೂ ಪೂರ್ತಿ ಪಳಗಿಸಿ ಹತೋಟಿಗೆ ತರಬಲ್ಲ, ಏನೋ ಒಂದು ತರಹ ಶಕ್ತಿ ಇತ್ತು. ಈ ಒರಟು ಧಾಂಡಿಗನ ಮೇಲೆ, ಕಾಠಿಣ್ಯವಾಗಲಿ, ಉಗ್ರಬಲ ಪ್ರದರ್ಶನವಾಗಲಿ ಯಾವ ಪರಿಣಾಮವನ್ನೂ ಮಾಡುವ ಹಾಗಿರಲಿಲ್ಲ. ಏಕೆಂದರೆ ಇವನು, ಅಂಥ ಎಲ್ಲ ಸಂದರ್ಭಗಳಲ್ಲೂ ಎದುರಾಳಿಗೆ ಮೀರಿಸಿದ ಕಾಠಿಣ್ಯ-ಶೌರ್ಯ-ಶಕ್ತಿಗಳನ್ನು ತೋರಿಸಬಲ್ಲವನಾಗಿದ್ದ. ಅಷ್ಟೇ ಅಲ್ಲ, ಪ್ರಯೋಗಿಸಲೂ ಸಿದ್ಧನಾಗಿರುತ್ತಿದ್ದ. ಆದರೆ ಹೀಗೆ-ತೀರ ಸೌಮ್ಯವಾದ ರೀತಿಯಲ್ಲಿ—ಅಡಗಿಸಲ್ಪಡುವುದೆಂದರೆ, ಇವನಿಗೆ ಅರ್ಥ

ವಾಗದೆ ದಿಗ್ಭ್ರಮೆಯಾಯಿತು. ತಿಳಿದ ಮಾತುಗಳೇ; ನೋಟ; ಅದೂ ಮುಚ್ಚುಮರೆಯಿಲ್ಲದೆ,. ಸರಳವಾಗಿ—ಸಾಮಾನ್ಯವಾಗಿತ್ತು; ಆದರೂ ಅವುಗಳಲ್ಲಿ ಏನೋ ಶಕ್ತಿ ಅಡಗಿತ್ತು—ಅದು ಜಾನ್‌ಗೆ ಅರ್ಥವಾಗಲಿಲ್ಲ. ಇದರ ಮರ್ಮ ಏನಿರಬಹುದು—ಎಂದು ಅವನು, ಮನಸ್ಸಿನಲ್ಲೇ ಚರ್ಚೆಮಾಡುತ್ತ, ಮೂರು ನಾಲ್ಕು ನಿಮಿಷ ಕಳೆದ. ಇನ್ನೂ ಅವನ ಮನಸ್ಸು ಯಾವ ತೀರ್ಮಾನಕ್ಕೂ ಬಂದಿರಲಿಲ್ಲ. ಆಗ ದೋಣಿಯು ತಳ ತೀರದ ಮರಳನ್ನು ತಾಕಿತು.

ನಾವು ಇದುವರೆಗೆ ಹೇಳಿದ ವಿಷಯಗಳು ನಡೆಯುತ್ತಿದ್ದ ಸಮಯದಲ್ಲೇ, ಅತ್ತ, ಹವಳದ್ವೀಪದ ಮೇಲೆ, ತೀರ ಬೇರೆಯಾದ ಘಟನಾ ಪರಂಪರೆಗಳು ನಡೆಯುತ್ತಿದ್ದವು.

ತೀರಕ್ಕೆ ಸ್ವಲ್ಪ ದೂರವಾಗಿ, ಉದ್ದಕ್ಕೂ ಹೊರವಾಗಿ ಬೆಳೆದು ನೆರಳಾಗಿದ್ದ ಮನೋಹರವಾದ ತೆಂಗಿನ ಮರಗಳ ನಡುವೆ ಹಾಯ್ದು, ತೀರದ ಕಡೆಗೆ ಒಬ್ಬ ನಡೆದು ಬರುತ್ತಿದ್ದ. ಅವನು ಸ್ಫುರದ್ರೂಪಿಯಾದ—ಗೌರವರ್ಣದ ಯುವಕನಾಗಿದ್ದ. ಈ ಸಮಯದಲ್ಲಿ, ನಮ್ಮ ಹಡಗಿನ ಬರವಿಗಾಗಿ ನಿರೀಕ್ಷಿಸುತ್ತಿದ್ದ ಅವನು, ಅದನ್ನು ಇದಿರುಗೊಳ್ಳುವುದಕ್ಕೋಸ್ಕರ, ತೀರದ ಕಡೆಗೆ ಇಳಿಜಾರಾಗಿದ್ದ ಹಚ್ಚನೆಯ ನೆಲದ ಮೇಲೆ, ಹಗುರವಾಗಿ ನಡೆದು ಬರುತ್ತಿದ್ದ. ಹಿಂಚೆ, ಸ್ವಲ್ಪ ದೂರದಲ್ಲಿ, ಮಸಿಗಪ್ಪು ಚರ್ಮದ ಬೆತ್ತಲೆಯಾದ ಒಬ್ಬ ಕಾಡು ಮನುಷ್ಯ—ಪೊದೆಗಳ ಸಂದಿನಲ್ಲಿ ಅತ್ತ ಇತ್ತ ತೂರಿ ಹರಿಯುವ ಕ್ರೂರ ಸರ್ಪದಂತೆ ಚಲಿಸುತ್ತ, ಇವನನ್ನೇ ಹಿಂಬಾಲಿಸಿ ಬರುತ್ತಿದ್ದ. ಇವನ ಕೈಯಲ್ಲಿ ಒಂದು ಮೋಟು ಹಿಡಿಯ-ಹರಿತವಾದ ಅಲಗಿನ-ಈಟಿಯಿತ್ತು. ಏನೂ ಅರಿಯದೆ ಮುಂದೆ ಹೋಗುತ್ತಿದ್ದ ಯುವಕನನ್ನು ತಿವಿದು ಕೊಂದು ಹಾಕುವ ಉದ್ದೇಶದಿಂದ—ಅನುಕೂಲ ಸಮಯಕ್ಕೆ ಹೊಂಚುತ್ತ, ಬರುತ್ತಿದ್ದ.

ಇವರಿಬ್ಬರ ವಿಷಯ ತಿಳಿಯದವರಿಗೆ—ಶಸ್ತ್ರಧಾರಿಯಾದ ಕಾಡು ಮನುಷ್ಯ, ಏಕೆ ಇನ್ನೂ ತನ್ನ ನಿಜವಾದ ಉದ್ದೇಶವನ್ನು ಸಾಧಿಸಿಲ್ಲ—ಎಂದು ವಿಸ್ಮಯವಾಗಬಹುದು; ಕಾಡು ಮನಷ್ಯನ ಕೈಲಿ ಹರಿತವಾದ

ಈಟಿ ಇತ್ತು, ನಿಜ. ಅವನಿಗೆ ಮುಂದೆ ಹೋಗುತ್ತಿದ್ದ ಬಿಳಿಯರ ಯುವಕನನ್ನು ಕೊಂದು ಹಾಕುವ ಉದ್ದೇಶವೂ ನಿಸ್ಸಂದೇಹವಾಗಿ ಇತ್ತು. ಅವನಿಗೆ ತನ್ನ ಕೈಲಿದ್ದ ಈಟಿಯನ್ನು ಗುರಿ ತಪ್ಪದಂತೆ ಎಸೆಯ ಬಲ್ಲ ಕೈಚಳಕವೂ ಇತ್ತು; ಅದರಲ್ಲಿ ಅನುಮಾನವಿಲ್ಲ. ಆದರೂ ಆ ದಸ್ಯು, ನಿರ್ಧರಿಸಿ ಕಾರ್ಯಸಾಧನೆಮಾಡದೆ ಇಲ್ಲಿಯವರೆಗೂ ಕೈತಡೆದು ಕೊಂಡೇ ಬಂದಿದ್ದ. ಅವನ ಈ ಅನಿರ್ಧಾರಕ್ಕೆ—ಬಲವಾದ ಕಾರಣ ಗಳಿದ್ದವು.

ಆ ಇಡೀ ಹವಳದ್ವೀಪದಲ್ಲಿ, ಯುವಕನಾದ ಹೆನ್ರಿ ಸ್ಟುಯರ್ಟನ ಮಿಂಚಿನ ವೇಗದ ಕಾಲುಗಳಿಗೆ ಸಮನಾದ ಇನ್ನೆರಡು ಕಾಲು ಗಳಿರಲಿಲ್ಲ; ಉಕ್ಕಿನಂಥ ಅವನ ತೋಳುಗಳಿಗೆ ಸಮನಾದ ಇನ್ನೊಂದು ಜೊತೆ ತೋಳುಗಳಿರಲಿಲ್ಲ; ಆ ಗಂಡುಗಲಿಯ ಗುಂಡಿಗೆಗೆ ಸಮನಾದ ಗುಂಡಿಗೆ ಇನ್ನೊಂದಿರಲಿಲ್ಲ. ಇದನ್ನು ಈ ದ್ವೀಪಕ್ಕೆ ವಲಸೆ ಬಂದು ನೆಲೆಸಿದ್ದ ಬಿಳಿಯ ಜನರೂ, ದ್ವೀಪದ ಮೂಲ ನಿವಾಸಿಗಳಾಗಿದ್ದ ಕಪ್ಪು ಜನರೂ ಚೆನ್ನಾಗಿ ಅರಿತಿದ್ದರು. ಹೆನ್ರಿಯ ಬೆನ್ನುಹತ್ತಿಬರುತ್ತಿದ್ದ ಕಿಯೋನ, ದ್ವೇಷ, ಪ್ರತೀಕಾರ ಬುದ್ಧಿ-ಇವುಗಳಲ್ಲಿ ಎಲ್ಲರನ್ನೂ ಮೀರಿ ಸಿದ ನಿಸ್ಸೀಮನಾಗಿದ್ದನೇ ಹೊರತು, ಧೈರ್ಯ–ಶಕ್ತಿ–ಸಾಹಸ–ವೇಗ ಇವು ಗಳಲ್ಲಿ,-ಅವನೂ ತನ್ನ ಇತರ ಜೊತೆ ಜನರಂತೆ ಸಾಧಾರಣನಾಗಿದ್ದ.

ಕೆಲವು ಕಾಲದ ಹಿಂದೆ ಕಿಯೋನನೂ ಅವನ ಕಡೆಯವರೂ ಗುಂಪು ಕಟ್ಟಿಕೊಂಡು, ಬಿಳಿಯರು ನೆಲಸಿದ್ದ ಪ್ರದೇಶದ ಮೇಲೆ ಬಿದ್ದು ಆಕ್ರಮಣ ಮಾಡಿದರು. ಆಗ ಹೆನ್ರಿ, ತನ್ನ ತಾಯಿಯ ಮನೆಯನ್ನು ರಕ್ಷಿಸುವ ಸಂದರ್ಭದಲ್ಲಿ, ಕಿಯೋನನಿಗೆ ತನ್ನ ವಜ್ರಮುಷ್ಟಿಯ ರುಚಿ ತೋರಿಸಿದ್ದ! ಮಿಂಚಿನಂತೆ ಎರಗಿ, ಮುಖದ ಮೇಲೆ ಬಿದ್ದ ಒಂದೇ ಏಟಿಗೆ, ಕಿಯೋನ ಉಸಿರು ಕಟ್ಟಿ ನೆಲಕ್ಕುರುಳಿದ್ದ. ಅಂದಿನಿಂದ, ಅವನು ಹೆನ್ರಿಯ ವಿಷಯವಾಗಿ ಎದೆಯಲ್ಲಿ ದ್ವೇಷವನ್ನು ಬೆಳೆಸುತ್ತ, ಪ್ರತಿಹಿಂಸಾಬುದ್ಧಿಯಿಂದ, ಸಮಯ ಕಾಯುತ್ತಿದ್ದ. ಇಂದು, ಹೆನ್ರಿ ತಮ್ಮ ಪಾಳೆಯದಿಂದ ಒಬ್ಬೊಂಟಿಗನಾಗಿ ಹೊರಟು, ನಿರ್ಜನವಾದ ಬೆಟ್ಟಗಳ ನಡುವೆ ಹಾದು, ತಾನು ನಿರೀಕ್ಷಿಸುತ್ತಿದ್ದ ಹಡಗು ಬಂದು

ನಿಲ್ಲುವ ಕೊಲ್ಲಿಯ ಕಡೆ ಹೋಗುತ್ತಿದ್ದಾಗ, ಆಕಸ್ಮಿಕವಾಗಿ ಕಿಯೋನನ ಕಣ್ಣಿಗೆ ಬಿದ್ದಿದ್ದ. ಕೂಡಲೆ ತನ್ನ ದುರುದ್ದೇಶಸಾಧನೆಗಾಗಿ ಕಿಯೋನ, ಸುಳುವು ಕೊಡದಂತೆ ಅವನನ್ನು ಹಿಂಬಾಲಿಸಿದ್ದ. ಹೆನ್ರಿಯ ಬಳಿ ಒಂದು ಬೇಟೆಯ ಚಾಕು ವಿನಃ ಬೇರೆ ಯಾವ ದೊಡ್ಡ ಆಯುಧಗಳೂ ಇರಲಿಲ್ಲ. ಆದರೂ ಈಟಿ ಹಿಡಿದ ಕಿಯೋನ, ಇಲ್ಲಿಯುವರೆಗೂ ಅವನ ಮೇಲೆ ಬೀಳುವಷ್ಟು ಅಥವಾ ಈಟಿಯನ್ನು ಗುರಿಯಿಟ್ಟು ಎಸೆಯು ವಷ್ಟು ಧೈರ್ಯ ತಂದುಕೊಂಡಿರಲಿಲ್ಲ. ಏಕೆಂದರೆ, ಶತ್ರು ಬಲು ಚುರು ಕಾಗಿದ್ದ ಗುರಿ ತಪ್ಪಿದ ಪಕ್ಷದಲ್ಲಿ, ಸ್ಟ್ಯೂಯರ್ಟ್ ತನಗಿಂತ ಬಲು ವೇಗವಾಗಿ ಓಡಬಲ್ಲನೆಂದೂ, ಒಂದು ವೇಳೆ ಹಾಗೆ ಮಾಡದೆ, ತಿರುಗಿ ಬಿದ್ದರೆ, ಒಂದೇ ಏಟಿಗೆ ತನ್ನನ್ನು ಮುಗಿಸಿಬಿಡುವಷ್ಟು ಬಲಾಢ್ಯನಾ ಗಿದ್ದನೆಂದೂ ಕಿಯೋನನಿಗೆ ಚೆನ್ನಾಗಿ ಗೊತ್ತಿತ್ತು.

ಹೆನ್ರಿ ಕಾಡಿನ ಗಿಡಮರ ಪೊದೆಗಳ ನಡುವೆ ಹಾಯ್ದು ಬರು ತ್ತಿದ್ದಾಗ, ಕಿಯೋನನಿಗೆ ತನ್ನ ಕೆಲಸ ಸಾಧಿಸಲು ಇದ್ದ ಸೌಲಭ್ಯ- ಈಗ, ಆ ಯುವಕ ತೀರವನ್ನು ಸಮೀಪಿಸುತ್ತ ಸ್ವಲ್ಪ ವಿರಳವಾದ ಬಯಲು ಪ್ರದೇಶಕ್ಕೆ ಬಂದಾಗ, ಇರಲಿಲ್ಲ. ದಟ್ಟವಾದ ಕಾಡಿನಲ್ಲಿ, ಪೊದೆಗಳ ಮರೆಯ ಅನುಕೂಲವಿದ್ದಾಗಲೇ ಹಿಂತೆಗೆದ ಅವನಿಗೆ, ಈಗ ಕಾರ್ಯಸಾಧನೆ ಅಸಾಧ್ಯವಾಗಿ ತೋರಿತು. ಆದ್ದರಿಂದ ಅವನು ಸದ್ಯಕ್ಕೆ ತನ್ನ ದುರುದ್ದೇಶವನ್ನು ಬಿಟ್ಟು, ಹಿಮ್ಮೆಟ್ಟಿ, ಪುನಃ ಕಾಡು ಸೇರ ಬೇಕಾಯಿತು.

ಸ್ಟ್ಯೂಯರ್ಟ್ ತಮ್ಮ ಪಾಳೆಯದಿಂದ ಸುಮಾರು ಆರು ಮೈಲಿ ನಡೆದು ಬಂದಿದ್ದ. ಈ ದೂರ, ಹತ್ತೊಂಭತ್ತು ವರ್ಷಗಳ ಪ್ರಾಯದ ಹುಡುಗನಿಗೆ ನೀರು ಕುಡಿದ ಹಾಗೆ; ಆದರೂ, ಈಗ ಅವನು ನಡೆದು ಬಂದಿದ್ದ ಹಾದಿ, ಒರಟಾದ ಬೆಟ್ಟಗುಡ್ಡ ಕಣಿವೆ ಕೊರಕಲುಗಳಲ್ಲಿ ಹತ್ತಿ ಇಳಿದು, ಬಳಸಿ ಬಂದಿದ್ದುದರಿಂದ ಅವನಿಗೆ ಸ್ವಲ್ಪ ಆಯಾಸವಾಗಿತ್ತು. ಆದ್ದರಿಂದ ಅವನು, ವಿಶ್ರಮಿಸಿಕೊಳ್ಳುವುದಕ್ಕೋಸ್ಕರ, ಅಲ್ಲೇ ಒಂದು ಬಂಡೆಯ ಮೇಲೆ ಕುಳಿತುಕೊಂಡು, " ಹುಂ! ಇನ್ನೂ ಬಂದಿಲ್ಲ-

ಮಾಸ್ಟರ್ ಗ್ಯಾಸ್ಕೋಯಿನ್.... ಹಿಂದೆ ನೀನು ಹೀಗೆ ಮಾಡುತ್ತಿರಲಿಲ್ಲ; ಗೊತ್ತಾದ ಕಾಲಕ್ಕೆ ಸರಿಯಾಗಿ ತಪ್ಪದೆ ಬರುತ್ತಿದ್ದೆ."

—ಎಂದು, ತನಗೆ ತಾನೇ ಗೊಣಗುಟ್ಟಿದ. ಆಮೇಲೆ ಎದ್ದು, ತೀರದ ಮರಳಿನ ಮೇಲೆ ಸುತ್ತಾಡುತ್ತ—ಚಿಪ್ಪುಗಳನ್ನು ಆಯ್ದು ಕೊಳ್ಳುತ್ತ–ಮಧ್ಯೆ ಮಧ್ಯೆ–ಆಸೆಯಿಂದ ಸಮುದ್ರದ ಕಡೆ ದಿಟ್ಟಿಸಿ ನೋಡುತ್ತ, ಸುಮಾರು ಒಂದು ಗಂಟೆ ಕಾಲವನ್ನು ಹಾಗೂ ಹೀಗೂ ಕಳೆದ. ಆಮೇಲೆ ಅವನಿಗೆ ಬೇಸರವಾಯಿತು. ಅಲ್ಲೇ ಒಂದು ಕಡೆ ಮರಳ ಮೇಲೆ-ಸಮುದ್ರದ ಕಡೆ ಬೆನ್ನುಮಾಡಿ, ಮಲಗಿ ಕೊಂಡ. ಬೇಗ ನಿದ್ದೆ ಬಂದುಬಿಟ್ಟಿತು.

ನಿಜವಾಗಲೂ, ಈಗ ಕಿಯೋನನಿಗೆ ತನ್ನ ಶತ್ರುವಿನಮೇಲೆ ಸೇಡುತೀರಿಸಿಕೊಳ್ಳಲು ಬಲು ಒಳ್ಳೇ ಸಮಯವಾಗಿತ್ತು. ಆದರೆ, ಹಗಲಲ್ಲೇ-ಅದರಲ್ಲೂ ಬೆಳಗಿನ ಹೊತ್ತಿನಲ್ಲೇ, ಹೆನ್ರಿ, ಅಸ್ವಾಭಾವಿಕವಾಗಿ, ನಿದ್ದೆಹೋದಾನು—ಎಂದು, ಕಿಯೋನ ಊಹಿಸಲು ಅಸಾಧ್ಯವಾದ ವಿಷಯವಾಗಿತ್ತು. ಆದ್ದರಿಂದ ಅವನು ಹಿಮ್ಮೆಟ್ಟಿ-ಕಾಡಿನಲ್ಲಿ ಮರೆಯಾಗಿದ್ದ.

ಹೆನ್ರಿ ಗಾಢನಿದ್ರೆಯಲ್ಲಿದ್ದಾಗಲೇ ನಮ್ಮ ಸಣ್ಣ ಹಡಗು, ದ್ವೀಪಾಭಿಮುಖವಾಗಿ ಬರುತ್ತ–ದಿಗಂತದಮೇಲೆ ಕಾಣಿಸಿಕೊಂಡು–ಅನಂತರ, ಅನುಕೂಲವಾದ ಗಾಳಿಯಲ್ಲಿ ಬೇಗ ಬೇಗ ತೇಲಿಬಂದು-ಕೊಲ್ಲಿಯನ್ನು ಪ್ರವೇಶಿಸಿ-ಲಂಗರುಬಿಟ್ಟು-ಅದರಿಂದ ನೀರಿಗಿಳಿಸಲ್ಪಟ್ಟ ಒಂದು ಚಿಕ್ಕ ದೋಣಿಯಲ್ಲಿ, ಹಡಗಿನ ಕ್ಯಾಪ್ಟನ್, ಸಿಡುಕುಮೋರೆಯ ಡಿಕ್ ಮತ್ತು ನಮ್ಮ ಸ್ನೇಹಿತ ಜಾನ್ ಬಂಪಸ್, ಈ ಮೂರು ಜನ ಕುಳಿತು ತೀರದ ಕಡೆ ಬರುತ್ತಿದ್ದರು.

ದ್ವೀಪದ ತೀರದಲ್ಲಿ ಒಂದು ಕಡೆ, ದೊಡ್ಡ ದೊಡ್ಡ ಬಂಡೆಗಳಿದ್ದವು. ದೋಣಿ ಅವುಗಳ ಮರೆಯಲ್ಲಿ ಒಂದು ಅನುಕೂಲವಾದ ಜಾಗದಲ್ಲಿ ನೆಲವನ್ನು ಮುಟ್ಟಿತು. ಇದೇ ಸಮಯದಲ್ಲಿ, ಕಾಡಿನಲ್ಲಿ ಅವಿತು ಹೊಂಚುತ್ತಿದ್ದ ಕಿಯೋನ, ಸ್ಟೂಯರ್ಟ್ ಏನುಮಾಡುತ್ತಿದ್ದಾನೋ-ನೋಡಬೇಕೆನ್ನುವ ಕುತೂಹಲದಿಂದ, ಈಚೆಗೆ ಬಂದ. ಅವನು

ಅವಿತು ಕೊಂಡಿದ್ದ ಸ್ಥಳದಿಂದ, ಹೆನ್ರಿ ಅವನ ಕಣ್ಣಿಗೆ ಬೀಳದೆ, ಮನೆ ಕಡೆ ಹೋಗೋ ಹಾಗೇ ಇರಲಿಲ್ಲ. ಆದ್ದರಿಂದ, ತನ್ನ ಶತ್ರು ಅಲ್ಲೇ ಎಲ್ಲೋ ಇದ್ದಾನೆಂದು ಕಿಯೋನನಿಗೆ ಗೊತ್ತಿತ್ತು.

ಸುತ್ತ ಹುಡುಕು ನೋಟ ಬೀರುತ್ತ, ಕಿರಾತ ಕಿಯೋನ ಮೆಲ್ಲಗೆ ಮೆಳೆಕಾಡಿನ ಅಂಚಿಗೆ ಬಂದು ನೋಡಿದ. ದೂರ-ಕೊಲ್ಲಿಯಲ್ಲಿ-ಲಂಗುರು ಬಿಟ್ಟದ್ದ ಹಡಗನ್ನು ನೋಡಿ ಆ ಕರಾಳನಿಗೆ ಆಶ್ಚರ್ಯವಾಯಿತು. ಮರುಕ್ಷಣವೇ, ಗಾಢನಿದ್ರೆಯಲ್ಲಿದ್ದ ಹೆನ್ರಿಯನ್ನು ನೋಡಿ, ಮಿತಿಮೀರಿದ ಸಂತೋಷದಿಂದ ಪೈಶಾಚಿಕವಾಗಿ ಹಲ್ಲುಕಿರಿದ. ಅವನ ದ್ವೇಷ ಮರು ಕಳಿಸಿ ಕೆರಳಿತು. ತತ್‌ಕ್ಷಣವೇ ಈ ಅನುಕೂಲ ಸಂದರ್ಭವನ್ನು ತಪ್ಪದೆ ಉಪಯೋಗಿಸಿಕೊಂಡು, ತನ್ನ ಶತ್ರುವನ್ನು ಇರಿದು ಕೊಂದು ಹಾಕಿಬಿಡಬೇಕೆಂದು ಮನಸ್ಸು ಮಾಡಿದ. ಹೆಜ್ಜೆಮೇಲೆ ಹೆಜ್ಜೆ ಇಡುತ್ತ, ಸದ್ದಾಗದಂತೆ, ಮಲಗಿ ನಿದ್ರೆಮಾಡುತ್ತಿದ್ದ ಹೆನ್ರಿಯನ್ನು ಸಮೀಪಿಸುತ್ತಿದ್ದ ತನ್ನ ಪ್ರತಿಹಿಂಸೆಯಲ್ಲೇ ನಟ್ಟಮನ ಸ್ಸುಳ್ಳವನಾಗಿದ್ದ ಕಾರಣ, ದೋಣಿಯಿಂದ ಇಳಿದ ನಮ್ಮ ಹಡಗಿನ ಕ್ಯಾಪ್ಟನ್, ಚಾಚಿ ಮರೆಯಾಗಿದ್ದ ಒಂದು ದೊಡ್ಡ ಬಂಡೆಯನ್ನು ಬಳಸಿ ಕೊಂಡು, ಇದ್ದಕ್ಕಿದ್ದ ಹಾಗೆಯೇ, ಈ ಘೋರಕೃತ್ಯ ನಡೆಯುವುದರಲ್ಲಿದ್ದ ಪ್ರದೇಶದಲ್ಲಿ ಕಾಣಿಸಿಕೊಂಡದ್ದನ್ನು, ಕಿಯೋನ ನೋಡಲಿಲ್ಲ. ಆದರೆ, ಕ್ಯಾಪ್ಟನ್ ಈ ಕಾಡುಮನುಷ್ಯನನ್ನು ನೋಡಿದ. ಕೂಡಲೆ ಹಿಂದಕ್ಕೆ ಸರಿದು, ಅದೇ ಕ್ಷಣದಲ್ಲೇ, ತನ್ನ ಹಿಂದೆ, ಜೊತೆಯಲ್ಲಿದ್ದ ಇಬ್ಬರಿಗೂ ಮರೆಯಲ್ಲಿರುವಂತೆ ಸನ್ನೆಮಾಡಿದ.

ಕ್ಯಾಪ್ಟನ್, ಮರೆಯಿಂದಲೇ ಇಣಿಕಿ, ಇನ್ನೊಮ್ಮೆ ನೋಡಿದ. ಆಗ, ನಿದ್ರೆ ಮಾಡುತ್ತಿದ್ದ ಹೆನ್ರಿಯನ್ನು ಕಂಡ ಇವನು ಏನೋ ಮೋಸಕೃತ್ಯ ನಡೆಯುವುದೆಂದು ಸಂಶಯಪಡುವುದಕ್ಕೆ ಮೊದಲೆ, ಕಾಡುಮನುಷ್ಯ, ಪೊದೆಗಳ ಮರೆಯಿಂದ, ನಿದ್ರಿಸುತ್ತಿದ್ದವನ ಪಕ್ಕಕ್ಕೆ, ತೇಲಿದ ಹಾಗೆ ಬಂದು, ತನ್ನ ಕೈಲಿದ್ದ ಈಟಿಯನ್ನು ಎತ್ತಿ—ಯುವಕನ ಎದೆಗೆ ತಪ್ಪದಂತೆ ಗುರಿ ಇಡಲೋಸ್ಕರವೋ ಎಂಬಂತೆ—ಒಂದು ಕ್ಷಣ, ಎತ್ತಿದ ಕೈಯನ್ನು ಹಾಗೇ ನಿಲ್ಲಿಸಿದ.

ಇನ್ನು ಕ್ಷಣಾರ್ಧಕ್ಕೂ ಅವಕಾಶವಿರಲಿಲ್ಲ. ಕ್ಯಾಪ್ಟನಿನ ಕೈಯಲ್ಲಿ ಒಂದು ಮೋಟು ಕೋವಿಯಿತ್ತು. ಅವನು, ಗುರಿತಪ್ಪದೆ ಇರಲೆಂದು ಒಂದು ಮೊಣಕಾಲೂರಿ ಕುಳಿತು, ಕ್ರೂರ ಕಿಯೋನನ ಮೇಲೆ ಗುರಿಯಿಟ್ಟು ಗುಂಡು ಹಾರಿಸಿದ; ಸಿಡಿಲಿನಂತೆ ಶಬ್ದವಾಯಿತು. ಅದರ ಹಿಂದೆಯೇ, ಕಿಯೋನ, ಏಟುತಾಗಿ ಗಟ್ಟಿಯಾಗಿ ಅರಚಿಕೊಂಡ. ಇರಿಯಲು ಎತ್ತಿದ್ದ ಅವನ ತೋಳು ಪಕ್ಕಕ್ಕೆ ಇಳಿಬಿತ್ತು. ಅವನ ಕೈಲಿದ್ದ ಈಟಿ, ನಿದ್ರಿಸುತ್ತಿದ್ದವನ ಮುಖದ ಮೇಲೆ ಅಡ್ಡಲಾಗಿ ಬಿತ್ತು. ಇವೆಲ್ಲವೂ ಹೆಚ್ಚುಕಡಿಮೆ ಏಕಕಾಲದಲ್ಲಿ ನಡೆದು, ಹೆನ್ರಿಗೆ ಎಚ್ಚರವಾಯಿತು. ಅವನು ಕೂಡಲೆ, ಚಿರತೆಯ ಚುರುಕಿನಿಂದ ನೆಗೆದು ನಿಂತ. ನಡೆದ ಸಂಗತಿ ಏನು—ಎಂದು ಇವನು ತಿಳಿದುಕೊಳ್ಳುವ ಮೊದಲೇ, ಕಿಯೋನ ಪೊದೆಗಳ ಕಡೆಗೆ ಓಡಿ ಮಾಯವಾದ. ಹೆನ್ರಿ, ಅದೇ ಕ್ಷಣದಲ್ಲೇ, ಬಿಲ್ಲಿನಿಂದ ಹೊರಟ ಬಾಣದಂತೆ, ಅವನ ಹಿಂದೆ ಓಡಿದ. ಇದನ್ನು ನೋಡಿ, ಮರೆಯಲ್ಲಿದ್ದ ಕ್ಯಾಪ್ಟನೂ ಅವನ ಜೊತೆಯಲ್ಲಿದ್ದ-ಗಂಟುಮೋರೆ ಡಿಕ್ಕೂ, ಜಾನ್‌ಬಂಪಸೂ ಈಚೆಗೆ ಬಂದು, ಕರೆಯ ಪ್ರದೇಶವನ್ನು ದಾಟಿ—ಮೂರು ಜನರೂ ಒಟ್ಟಿಗೆ ಕೂಗುತ್ತ—ಘರ್ಜಿಸುತ್ತ—ಕಾಡಿನ ಕಡೆ ಓಡಿದರು.

---

೩

## ಸ್ಯಾಂಡೀ ಕೊಲ್ಲಿಗೆ

ಕ್ಯಾಪ್ಟನ್ ಹಾರಿಸಿದ ಗೋಲಿ ಕಿಯೋನನ ಬಲತೋಳಿಗೆ ನೇರವಾಗಿ ತಾಗಿತ್ತು. ಅವನು ಪ್ರಾಣಭಯದಿಂದ ಓಡುತ್ತಿದ್ದ. ಆದರೆ, ಚಿಗರಿಯಂತೆ ಓಡುತ್ತ, ಹಿಂಬಾಲಿಸುತ್ತಿದ್ದ ಹೆನ್ರಿಯ ಕೈಯಿಂದ ಅವನು ತಪ್ಪಿಸಿಕೊಂಡು ಹೋಗಲು ಸಾಧ್ಯವೇ ಇರಲಿಲ್ಲ. ಕಾಲು ಮೈಲಿ ಹಿಂಬಾಲಿಸುವುದರಲ್ಲೇ ಹೆನ್ರಿ ಕೀಯೋನನನ್ನ ಹಿಡಿದು ನೆಲಕ್ಕು

ರುಳಿಸಿದ. ನಿಸ್ಸಹಾಯನಾದ ದಸ್ಯುವು, ಪ್ರಾಣದ ಮೇಲಿನ ಆಸೆಯುನ್ನು ತೊರೆದು, ನಿರಾಶೆಯ ನೋಟದಿಂದ, ತನ್ನನ್ನು ಜಯಿಸಿದವನ ಮುಖ ವನ್ನು ದಿಟ್ಟಿಸಿ ನೋಡುತ್ತ—ಏದುತ್ತ ಏದುತ್ತ ನೆಲದ ಮೇಲೆ ಬಿದ್ದು ಕೊಂಡಿದ್ದ. ಇನ್ನು ಒಂದೋ, ಅರ್ಧವೋ ಕ್ಷಣದಲ್ಲಿ ತನಗೆ ಸಾವು ಸಿದ್ಧ ಎಂದು ಕಿಯೋನ ತಿಳಿದುಕೊಂಡುಬಿಟ್ಟಿದ್ದ. ಅದರ ಭಯ ಅವನ ಕಣ್ಣುಗಳಲ್ಲಿ ಚೆನ್ನಾಗಿ ಪ್ರಕಟವಾಗಿತ್ತು. ಮೊದಲೇ ವಿಕಾರವಾದ ಅವನ ಕಪ್ಪುಮುಖ, ಈಗ ಮೃತ್ಯುಭಯದಿಂದ ವಿವರ್ಣವಾಗಿ, ಮತ್ತೂ ವಿಕಾರವಾಗಿತ್ತು.

ಹೆನ್ರಿ, ಒಂದು ಮಂಡಿಯನ್ನು ಕಿಯೋನನ ಎದೆಯಮೇಲೆ ಊರಿ, ಎಡಗೈಯಿಂದ ಅವನ ಗೋಣನ್ನು ಹಿಸುಕುತ್ತ, ಸೊಂಟದಲ್ಲಿದ್ದ ಉದ್ದ ವಾದ ಮೊನೆಯಾದ ಚಾಕುವನ್ನು ಒರೆಯಿಂದ ಎಳೆದು-ಎತ್ತಿಹಿಡಿದು,

" ಎಲ್ಲಾ ಪಾಪೀ !-ಪಾತಕೀ!!........ಹಾಗಾದರೆ, ಹೋದಸಲ ನಾವು ಭೇಟಿಯಾದಾಗ, ನಾನು ಕೊಟ್ಟಿದ್ದು ಸಾಲದು ಅಂತ ಕಾಣುತ್ತೆ, ಅಲ್ಲವೇನೋ ಠಕ್ಕಾ? ಅದಕ್ಕೇ, ಈಗ-ಎರಡನೇ ಸಲ-ನನ್ನ ಹಾದಿಗೆ ಅಡ್ಡವಾಗಿ ಬಂದೆಯೇನೋ ಭಂಡಾ!—ಆಗಲಿ, ಆಗ ಬಿಸಿ ಮುಷ್ಟಿ ರುಚಿ ನೋಡಿದ್ದೆ; ಈಗ ನೋಡು—ಉಕ್ಕಿನ ಅಲಗು—ಅದಕ್ಕಿಂತ ರುಚಿಯಾಗಿದೆ!—ತಣ್ಣಗಿದೆ!!"—ಎಂದ.

ಕಿಯೋನನಿಗೆ ಹೆನ್ರಿಯ ಭಾಷೆಯಾದ ಇಂಗ್ಲೀಷು ಮಾತ ನಾಡಲು, ಬಾರದು; ಆದರೂ, ತಕ್ಕಮಟ್ಟಿಗೆ ಅರ್ಥಮಾಡಿಕೊಳ್ಳಬಲ್ಲವ ನಾಗಿದ್ದ. ಅಲ್ಲದೆ, ಈಗ ಹೆನ್ರಿಯ ಹುಬ್ಬುಗಳನ್ನು ಗಂಟಿಕ್ಕಿದ್ದ ಕೋಪ, ಅವನ ಎತ್ತಿದ ಕೈಯ್ಯಲ್ಲಿ ಮಿಂಚುತ್ತಿದ್ದ ಮೊನಚಾದ ಚಾಕು, ಅವನು ಮಾತನಾಡಿದ ಧಾಟಿ-ಧ್ವನಿ, ಇವುಗಳಿಂದ ಕಿಯೋನನಿಗೆ ಯುವಕ ನಾಡಿದ ಮಾತುಗಳ ಅರ್ಥ ಪೂರ್ಣ ಗ್ರಹಿಕೆಯಾಯಿತು. ಹೆನ್ರಿಯ ಮಾತುಗಳಿಗೆ ಅವನು ಏನಾದರೂ ಉತ್ತರ ಕೊಡಬೇಕೆಂದು ಇದ್ದಿ ದ್ದರೆ, ಅದು ಸಾಧ್ಯವಾಗುವ ಹಾಗೇ ಇರಲಿಲ್ಲ. ಅವನ ಕಪ್ಪು ಮುಖ ನೀಲಿಗಟ್ಟುವ ಮಟ್ಟಿಗೆ, ಹೆನ್ರಿ, ಅವನ ಶ್ವಾಸನಾಳವನ್ನು ಹಿಸುಕಿ ಹಿಡಿ ದಿದ್ದ. ಅಲ್ಲದೆ ತನ್ನ ಕೈಲಿದ್ದ ಚಾಕುವಿನ ಮೊನಚಾದ ತುದಿಯನ್ನು

ಅವನ ಹೃದಯದ ನೇರದಲ್ಲಿ ಚರ್ಮಕ್ಕೆ ಸೋಕಿಸಿ ಹಿಡಿದಿದ್ದ. ಈ ರೀತಿ, ಮೃತ್ಯು ಎದೇ ಮೇಲೇ ಕೂತಿದೆಯೆಂದು, ಕೆಳಗೆ ಬಿದ್ದಿದ್ದ ತನ್ನ ಶತ್ರುವಿಗೆ ಚೆನ್ನಾಗಿ ಮಂದಟ್ಟಾಗುವಂತೆ ಮಾಡಿದ ಮೇಲೆ, ಹೆನ್ರಿ, ಇದ್ದಕ್ಕಿದ್ದ ಹಾಗೆಯೇ ತನ್ನ ಹಿಡಿತವನ್ನು ಬಿಟ್ಟು, ಎದ್ದು, ಚಾಕುವನ್ನು ಒರೆಯೊಳಗೆ ಸೇರಿಸುತ್ತ, ಆ ದಸ್ಯುವಿಗೂ ಏಳುವಂತೆ ಅಪ್ಪಣೆ ಮಾಡಿದ. ಗುಂಡಿನೇಟು, ಭಯ, ಓಟ ಇವುಗಳಿಂದ ಕಂಗೆಟ್ಟಿದ ಆ ಪ್ರಾಣಿ, ಸ್ವಲ್ಪ ಪ್ರಯಾಸದಿಂದ ಮೆಲ್ಲಗೆ ಎದ್ದು ನಿಂತ. ಈ ಸಮಯಕ್ಕೆ ಸರಿಯಾಗಿ, ನಮ್ಮ ಕ್ಯಾಪ್ಟನೂ ಅವನ ಇಬ್ಬರು ಜೊತೆಯವರೂ-ಕೂಗುತ್ತ-ಓಡುತ್ತ ಇವರ ಸಮೀಪಕ್ಕೆ ಬಂದರು. ಕ್ಯಾಪ್ಟನ್, ಸಂತೋಷಭರದಿಂದ ಕೈಚಾಚಿ, ಯುವಕನ ಕೈಹಿಡಿದು ಕುಲುಕುತ್ತ,

"ಆಹಾ! ನಾನು ಒಳ್ಳೇ ಸಮಯಕ್ಕೇ! ಬಂದಹಾಗಾಯಿತು ಹೆನ್ರಿ! ಇನ್ನು ಒಂದು, ಒಂದೇ ಒಂದು-ಕ್ಷಣ ತಡವಾಗಿ ಬಂದಿದ್ದರೆ, ಮಗೂ, ಈ ಪಾಪಿ ನಿನ್ನ ರಕ್ತದಿಂದ, ತೀರದ ಮರಳನ್ನು ತೋಯಿಸಿ ಬಿಡುತ್ತಿದ್ದ!-ಇದರಲ್ಲಿ ಅನುಮಾನವಿಲ್ಲ!"-ಎಂದ.

"ಓ—ಹಾಗಾದರೆ, ಗೋಲಿ ಹಾರಿಸಿದವರು ನೀವೋ-ಕ್ಯಾಪ್ಟನ್ ಗ್ಯಾಸ್ಕೋಯಿನ್? ನೀವು ನನ್ನ ಪ್ರಾಣ ಉಳಿಸಿದ್ದು ಇದು ಎರಡನೇ ಸಲ! ಇದಕ್ಕಾಗಿ, ನಾನು ಅತ್ಯಂತ ಕೃತಜ್ಞತೆಯಿಂದ ನಿಮಗೆ ವಂದನೆ ಮಾಡುತ್ತೇನೆ."

ಹೀಗೆಂದು ಹೇಳಿ ಹೆನ್ರಿ, ಬಹಳ ಕೃತಜ್ಞತೆಯಿಂದ ಕ್ಯಾಪ್ಟನಿನ ಕೈಯ್ಯನ್ನು ಒತ್ತುತ್ತ, ಜೇಬಿನಿಂದ ಒಂದು ಕಾಗದ ತೆಗೆದು,

"ನೋಡಿ, ನಮ್ಮ ತಾಯಿಯಿಂದ ನಿಮಗೊಂದು ಕಾಗದ ಇದೆ; ಈ ಕೊಲ್ಲಿಯಲ್ಲಿ ನಿಮ್ಮನ್ನು ಕಂಡು, ಕೊಡಬೇಕೆಂದು ಹೇಳಿ ನನ್ನನ್ನ ಇಲ್ಲಿಗೆ ಕಳಿಸಿದ್ದಾಳೆ"—ಎಂದ.

ಇವರಿಬ್ಬರ ಮಧ್ಯೆ ಈ ಸಂಭಾಷಣೆ ನಡೆಯುತ್ತಿದ್ದಾಗ, ಸಿಂಡ್ರುವೋರೆ ಡಿಕ್ ಮತ್ತು ಧಾರಾಳದೇಹಿ ಬಂಪಸ್ ಇಬ್ಬರೂ ಗಾಯಗೊಂಡಿದ್ದ ಕಿಯೋನನನ್ನು ಸ್ವಲ್ಪ ದೂರ ಒಯ್ದು, ಅವನ ಮೇಲೆ ಪಹರೆ ಇದ್ದರು ಒಬ್ಬೊಂಟಿಗನಾಗಿ, ಈಗ ಕೇವಲ ನಿಸ್ಸಹಾಯ

ನಾಗಿ, ತಮ್ಮ ವಶದಲ್ಲಿದ್ದ ಕಿಯೋನನನ್ನು ಹಿಡಿದುಕೊಂಡಿರುವುದು ಗಂಡಸರು ಮಾಡುವ ಕೆಲಸವಲ್ಲವೆಂದು ಬಗೆದು, ಹಾಗೆ ಮಾಡದೆ, ಅವನ ಮೇಲೆ ನಿಗಾ ಮಾತ್ರ ಇಟ್ಟು ಕಾಯುತ್ತಿದ್ದರು. ಇವರಿದ್ದ ರೀತಿಯಲ್ಲಿ, ಏನೋ ಒಂದು ತರದ ಆರಾಮು-ಅಲಕ್ಷ್ಯ ತೋರುತ್ತಿದರೂ, ಅವನು ತಪ್ಪಿಸಿಕೊಂಡು ಹೋಗುವ ಪ್ರಯತ್ನದ ಸೂಚನೆ ಕಂಡರೂ ಅವನ ಮೇಲೆ ಬೀಳಲು ಸಿದ್ಧರಾಗಿದ್ದರು. ಆದರೆ ಬಡಪಾಯಿ ಕಿಯೋನನಿಗೆ ಆ ತರದ ಆಸೆಯಾಗಲಿ, ಯೋಚನೆಯಾಗಲಿ ಇದ್ದಹಾಗೆ ಕಾಣಿಸುತ್ತಿರಲಿಲ್ಲ. ಗುಂಡಿನೇಟಿನ ಗಾಯದಿಂದ ರಕ್ತಸೋರಿ ಹೋಗಿದ್ದರಿಂದಲೂ, ಕೆಲವು ಕ್ಷಣಗಳ ಹಿಂದೆ ನಡೆದ ಹೋರಾಟದಿಂದಲೂ, ಅವನ ಮೈ ನುಜ್ಜುಗುಜ್ಜಾಗಿ, ಪೂರಾ ಆಯಾಸವಾಗಿ ಬಿಟ್ಟಿತ್ತು. ಅವನ ದೇಹ, ನೆಲಕ್ಕೆ ಉರುಳಿಬಿಡುವ ತೆರದಲ್ಲಿ ಕುಸಿದು ಕುಗ್ಗಿ ಬಾಗಿತ್ತು. ಆದರೂ, ಕಪ್ಪುಮೋರೆಯಲ್ಲಿ ಹೊಳೆಯುತ್ತಿದ್ದ ಅವನ ಕಣ್ಣುಗಳಲ್ಲಿ ಏನೋ ವಿಚಿತ್ರವಾದ ಒಂದು ತರಹ ನೋಟವಿತ್ತು. ಆದ್ದರಿಂದ, ಅನವಶ್ಯಕವೆಂದು ತೋರಿದರೂ ಜಾನ್ ಬಂಪಸ್, ಸ್ವಲ್ಪ ಹೆಚ್ಚು ಎಚ್ಚರಿಕೆಯಿಂದಲೇ ಇದ್ದ.

ಕ್ಯಾಪ್ಟನ್ ಗ್ಯಾಸ್ಕೋಯಿನ್, ಮೇಲೆ ತಿಳಿಸಿದ ಕಾಗದವನ್ನು ಇನ್ನೂ ಓದುತ್ತಲೇ ಇದ್ದ ಆಗ ಕಿಯೋನ ಒಂದು ಚಮುಕು ಮಾಡಿದ. ಅವನು ಬಲು ಹಠಾತ್ತಾಗಿ, ತನ್ನ ಎಡಗಾಲನ್ನು ಸರ್ಲಿ*ಡಿಕ್ಕನ ಕಾಲುಗಳ ಹಿಂಬದಿಗಿಟ್ಟು, ಗಾಯವಾಗದ ಕೈಯಿನ ಮುಷ್ಟಿಯಿಂದ, ಆ ಅಳುಮೋರೆಯವನ ಇಳೀಬಿದ್ದ ಮೂಗಿನಮೇಲೆ ಬಲವಾಗಿ ಒಂದು ಏಟು ಕೊಟ್ಟು, ಅವನನ್ನು ಧೊಪ್ಪನೆ ನೆಲಕ್ಕುರುಳಿಸಿದ. ಆದೇ ಕ್ಷಣದಲ್ಲಿ ಜಾನ್ ಬಂಪಸ್, ಅಷ್ಟೇ ವೇಗದಿಂದ, ಕೈಗಳನ್ನು ಚಾಚಿ ಕಿಯೋನನ ಮೇಲೆ ಎರಗಿದ. ಆದರೆ ಆ ಕಪಟದಸ್ಯು, ಅತಿ ಚಳಕದಿಂದ ಕುಸಿದು—ತಲೆತಗ್ಗಿಸಿ, ಬಂಪಸನ ಚಾಚಿದ ತೋಳಿನ ಕೆಳಗೇ ಈಲು† ಮೀನಿ

* Surly ಗಂಟಿಕ್ಕಿದ ಸಿಡುಕು ಮುಖವುಳ್ಳವನು.

† Eel ಒಂದು ಜಾತಿಯ ಚಪ್ಪಟೆದೇಹದ ನುಣಿಚಿಕೊಳ್ಳುವುದರಲ್ಲಿ ಚುರುಕಾದ ಮೀನು.

ಸಂತೆ ನುಸುಳಿ, ನುಣುಚಿಕೊಂಡು-ಜಿಂಕೆಯ ಹಾಗೆ ಓಡುತ್ತ, ಕಾಡನ್ನು ಹೊಕ್ಕುಬಿಟ್ಟ.

ಕೋಪ-ವಿಸ್ಮಯಗಳೆರಡೂ ಏಕಕಾಲದಲ್ಲಿ ಉಂಟಾಗಿದ್ದ ಜಾನ್ ಬಂಪಸ್—ಸ್ವಲ್ಪ ಅಪ್ರತಿಭನಾಗಿ—ತಿರುಗಿ—ದೌಡಾಯಿಸುತ್ತಿದ್ದ ಕಿಯೋನನನ್ನು ಹಿಂಬಾಲಿಸಲು ಹೆಜ್ಜೆ ಇಟ್ಟ. ಅದನ್ನು ನೋಡಿ ಕ್ಯಾಪ್ಟನ್ ಗ್ಯಾಸ್ಕೋಯಿನ್,

"ನಿಲ್ಲು, ನಿಲ್ಲು!—ಬಂಪಸ್. ಪಾಪಿ!—ಕಂಗೆಟ್ಟು ಹೋಗಿದ್ದಾನೆ!—ಹೋಗಲಿ ಬಿಡು."

—ಎಂದು ಕೂಗಿ ಹೇಳಿದ. ಜಾನ್ ನಿಂತ; ತಿರುಗಿದ; ಹಾಗೆಯೇ ತಲೆ ತಿರುಗಿಸಿ, ಭುಜದ ಹಿಂದೆ ದಿಟ್ಟಿಸಿದ; ಹಿಂದು ಮುಂದು ನೋಡಿದ; ಕೊನೆಗೆ, ಕೈಗಳೆರಡನ್ನೂ ಷರಾಯಿ ಜೇಬುಗಳಲ್ಲಿ ತೂರಿಸಿಕೊಂಡು, ನಾವಿಕ ಕುಲಕ್ಕೆ ಸಹಜವಾದ ಔದಾಸೀನ್ಯವನ್ನು ಪ್ರಕಟಿಸುತ್ತ—ಜಗ್ಗು ಹಾಕುತ್ತ ಹಿಂದಿರುಗಿ ಬಂದ.

ಕ್ಯಾಪ್ಟನ್ ಗ್ಯಾಸ್ಕೋಯಿನ್ ಕಾಗದ ಓದುತ್ತಿದ್ದಾಗ ಅವನ ಮುಖದಲ್ಲಿ ಏನೋ ಅಸಂತುಷ್ಟಿಭಾವ ಕಾಣುತ್ತಿತ್ತು. ಅದನ್ನು ನೋಡಿ ಹೆನ್ರಿ,

"ಕಾಗದದಲ್ಲಿ ಏನೋ ಅಹಿತವಾದ ವಿಷಯ ಇರೋ ಹಾಗೆ ಕಾಣುತ್ತೆ."—ಎಂದ.

"ಹೌದು, ಈ ಯುದ್ಧಕಾಲದಲ್ಲಿ ತಕ್ಕಮಟ್ಟಿಗೆ ಅಹಿತವಾಗಿಯೇ ಇದೆ ವಿಷಯ—ಮಗು," (ಕಾಗದವನ್ನು ಮಡಿಸಿ ಷರಟಿನ ಒಳಜೇಬಿನಲ್ಲಿಟ್ಟುಕೊಳ್ಳುತ್ತ) "ದ್ವೀಪದ ಆಚೆ ಪಕ್ಕದ ಕೊಲ್ಲಿಯಲ್ಲಿ, ಬ್ರಿಟಿಷರ, ಕಾವಲು ಹಡಗು—ಆ ಹಾಳು "**ಟಾಲಿಸ್ಮನ್**" ಬಂದು, ಲಂಗರು ಬಿಟ್ಟು ನಿಂತಿದೆಯಂತೆ."

"ಕಳ್ಳರು ಕಾವಲಿಗೆ ಹೆದರಬೇಕು; ಸಾಚಾ ವ್ಯಾಪಾರಿ ಅದರಿಂದ ಕಳವಳಪಡಲು ಏನು ಕಾರಣವೋ ಕಾಣೆ."

ಈ ಸಮಯದಲ್ಲಿ ಇವರು, ದ್ವೀಪದ ಒಳಭಾಗವನ್ನು ತಲುಪಿ, ಅಲ್ಲಿ ಮೊದಲು ಹೆನ್ರಿ, ಕೊಲ್ಲಿಯನ್ನು ತಲುಪಲು ನಡೆದು ಬಂದ, ಬೆಟ್ಟ

ಗುಡ್ಡಗಳ ಕಡಿದಾದ ತಿಟ್ಟು ಹಾದಿಯಲ್ಲಿ ನಡೆದು ಹೋಗುತ್ತಿದ್ದರು. ಹೆನ್ರಿ ಆಡಿದ ಮಾತಿಗೆ ಉತ್ತರವಾಗಿ ಗ್ಯಾಸ್ಕೋಯಿನ್,

"ನೀನಾಡಿದ ಮಾತುಗಳಿಂದ, ಯುದ್ಧದ ಮತ್ತು ಪಹರೆ ಕೆಲಸ ಮಾಡೋ ಹಡಗುಗಳ ರೀತಿ-ನಡವಳಿಕೆ-ನಿಯಮ ಒಂದೂ ನಿನಗೆ ಗೊತ್ತಿಲ್ಲಾಂತ ಕಾಣುತ್ತೆ, ಮಗು. ನಾನು ಈಗ ಮಾಡುತ್ತಿರೋ ವ್ಯಾಪಾರಕ್ಕೆ ಸಹಾಯಕರಾಗಿ, ನನ್ನ ಬಳಿ ಎಷ್ಟು ಜನ ಅವಶ್ಯಕವಾಗಿ ಇರಬೇಕು ಅನ್ನೋದು ನಿನಗೆ ಗೊತ್ತಿಲ್ಲವೇ? ನನ್ನ ಹಡಗಿನಂತಹ ವ್ಯಾಪಾರ ನೌಕೆ ನಡೆಸೋಕೆ ಇರೋ ಜನ, ಹೆಚ್ಚು-ಅಥವಾ ಕಡಿಮೆ ಅನ್ನೋ ಮಾತಿಗೆ, ನನಗೂ ಬ್ರಿಟಿಷ್ ಸರ್ಕಾರದ ನೌಕಾಪಡೆಯ ಒಬ್ಬ ನಾಯಕನಿಗೂ ಭಿನ್ನಾಭಿಪ್ರಾಯ ಉಂಟಾಗೇ ಆಗುತ್ತೆ; ಅದು ಅನಿವಾರ್ಯ. ಆದ್ದರಿಂದ ನನ್ನ ಹಡಗಿನಲ್ಲಿ ನಿಯಮಕ್ಕಿಂತ ಹೆಚ್ಚು ಮಂದಿ ಇದ್ದಾರೆ—ಎಂದು ಭಾವಿಸಿ—ನನ್ನ ಜನರಲ್ಲಿ ಗಟ್ಟಿಗರಾದ ಕೆಲವರನ್ನು ಅವನು ತನ್ನ ಅಧಿಕಾರ ಬಲದಿಂದ ತೆಗೆದುಹಾಕಬಹುದು. ಈಗಿನ ಸಂದರ್ಭದಲ್ಲಿ, ನನ್ನ ಹಡಗಿನ, ಜನರ ಸಂಖ್ಯೆ ಕಡಿಮೆಯಾದರೆ ನನಗೆ ಬಹಳ ಕಷ್ಟವೂ ತೊಂದರೆಯೂ ಆಗುತ್ತೆ"

—ಎಂದ. ಈ ಹೊತ್ತಿಗೆ ಅವರು ಒಂದು ಎತ್ತರವಾದ ದಿಣ್ಣೆಯನ್ನೇರಿದ್ದರು. ಇಲ್ಲಿಂದ ಒಂದು ದಿಕ್ಕಿನಲ್ಲಿ ಸಮುದ್ರವೂ, ಅದರ ಎದುರು ದಿಕ್ಕಿನಲ್ಲಿ, ಹೊರವಾಗಿ, ದಟ್ಟವಾಗಿ ಬೆಳೆದಿದ್ದ ದ್ವೀಪದ ಕಾಡು ಪ್ರದೇಶವೂ ಕಾಣುತ್ತಿತ್ತು. ಗ್ಯಾಸ್ಕೋಯಿನ್, ಮಾತು ಮುಂದರಿಸಿ, ಏನೋ ಜ್ಞಾಪಿಸಿಕೊಂಡವನಂತೆ,

"ಹ್ಞಾ! ಅಂದ ಹಾಗೆ—ಆ ರೀತಿ ಆಗದ ಹಾಗೆ ನಾನು ಮೊದಲೇ ಎಚ್ಚರಿಕೆ ತೆಗೆದುಕೊಳ್ಳಬೇಕು! ಹೌದು, ಹೌದು!........ ಇಲ್ಲಿ ಬಾ, ಡಿಕ್"—

—ಎಂದು, ಅವನನ್ನು ಒಂದು ಪಕ್ಕಕ್ಕೆ ಸ್ವಲ್ಪ ದೂರ ಕರೆದುಕೊಂಡು ಹೋಗಿ ಪಿಸು ಮಾತಿನಲ್ಲಿ,

"ನೋಡು ಡಿಕ್, ನೀನು ನಮ್ಮ ಹಡಗಿಗೆ ವಾಪಸು ಹೋಗಿ, ಸಾಕಾದಷ್ಟು ತಿಂಡಿ, ಬಂದೂಕು, ಮದ್ದು-ಗುಂಡು ಎಲ್ಲ ಕೊಟ್ಟು—

ನಮ್ಮ ಜನಗಳ ಪೈಕಿ, ಗಟ್ಟಿಗರಾದ ಹತ್ತು ಮಂದೀನ, ಈ ಕೂಡಲೆ ತೀರದ ಮೇಲೆ ಕಳಿಸೋ ಹಾಗೆ ನನ್ನ "ಮೇಟ"* ಗೆ ಹೇಳು. ಹಾಗೆ ಬಂದೋರು, ತೀರದ ಮೇಲೆ ಎಲ್ಲಿ ಬೇಕಾದರೂ ಅವಿತುಕೊಂಡಿರಲಿ. ನನಗೆ ಬೇಕಾಗೋವರೆಗೂ ಅವರು ಕಣ್ಣಿಗೆ ಕಾಣಿಸದಂತೆ-ಕಿವಿಗೆ ಬೀಳ ದಂತೆ ಇರಬೇಕು—ಅಷ್ಟೆ. ಗೊತ್ತಾಯಿತೇ !-ಹೋಗು..........."
—ಎಂದ. ಡಿಕ್ ಹೊರಟ. ಗ್ಯಾಸ್ಕೋಯಿನ್ ಉಳಿದಿಬ್ಬರನ್ನು ಸೇರಿ,

"ಹುಂ—ಇನ್ನು ದಾರಿ ತೋರಿಸಿ ಮುಂದೆ, ಮಾಸ್ಟರ್ ಹೆನ್ರಿ ಸಾಹೇಬರೇ! ನಾವಿಬ್ಬರೂ ತಮ್ಮ ಬೆನ್ನಿಗೆ ಅಂಟಿಕೊಂಡೇ ಬರು ತ್ತೇವೆ"—ಎಂದ.

ಹೆನ್ರಿ ಸ್ಟೂಯರ್ಟ್ ಇವರಿಬ್ಬರನ್ನೂ ಈಗ ಕರೆದೊಯ್ಯುತ್ತಿದ್ದ ದ್ವೀಪದ ಭೂಭಾಗ, ಎತ್ತನೋಡಿದರೂ ವಿವಿಧವಾದ ಮನೋಹರ ದೃಶ್ಯಗಳಿಂದ ಕಂಗೊಳಿಸುತ್ತ, ಅತಿ ರಮಣೀಯವಾಗಿಯೂ, ವರ್ಣ ಮಯವಾಗಿಯೂ-ಸೊಂಪಾಗಿಯೂ, ಇತ್ತು. ಈ ತೆರನ ಪ್ರಕೃತಿ ಸೌಂದರ್ಯ—ವಿಪುಳತೆ—ಪೆಸಿಫಿಕ್ ಸಾಗರದಲ್ಲಿ, ಉಷ್ಣವಲಯದ ಜ್ವಾಲಾಮುಖಿಗಳಿಂದ ಉತ್ಪನ್ನವಾದ ದ್ವೀಪಗಳ ವೈಶಿಷ್ಟ್ಯವಾಗಿತ್ತು.

"ಇದು ಎಷ್ಟು ಸೊಗಸಾದ ಸ್ಥಳ?"

—ಎಂದ, ಹೆನ್ರಿ, ಪ್ರಶ್ನಾರ್ಥಕ ಧ್ವನಿಯಲ್ಲಿ. ಈ ಸಮಯದಲ್ಲಿ ಅವರೆಲ್ಲ ಒಂದು ಅತ್ಯುನ್ನತವಾದ ಪ್ರಪಾತದ ಅಂಚಿಗೆ ಬಂದು ನಿಂತಿ ದ್ದರು. ಅಲ್ಲಿಂದ, ಇದುವರೆಗೂ ಕಾಣದೆ ಇದ್ದ, ದ್ವೀಪದ ಆಚೆ ಪಕ್ಕದ ಇಡೀ ನೋಟ, ತಡೆಯಿಲ್ಲದೆ ಕಾಣುತ್ತಿತ್ತು. ಒಂದೆರಡು ಕ್ಷಣ, ನಿಂತಹಾಗೆಯೇ ಸುತ್ತ ನೋಟವನ್ನು ಬೀರಿ, ನಿಟ್ಟುಸಿರು ಬಿಡುತ್ತ— ಗ್ಯಾಸ್ಕೋಯಿನ್, ಸ್ವಲ್ಪ ವಿಷಾದದ ಧ್ವನಿಯಲ್ಲಿ,

"ಆಹಾ! ಎಷ್ಟು ಸುಂದರವಾಗಿ—ಮನೋಹರವಾಗಿದೆ, ಸ್ಥಳ! ಇಡೀ ದ್ವೀಪವೇ ಸಂತೋಷದಿಂದ ನಗುತಿರೋ ಹಾಗಿದೆ!—ಶಾಂತಿ— ಸುಖ—ರಂಜನೆ ಎಲ್ಲಕ್ಕೂ ತೌರುಮನೆಯಾಗಿದೆ!—ಒಂದು ಕಾಲದಲ್ಲಿ

* Mate ಹಡಗಿನ ಕ್ಯಾಪ್ಟನಿಗೆ ಎರಡನೇ ಅಧಿಕಾರಿ.

—ನಾನು ಇಲ್ಲೇ ನೆಲಸಿಬಿಟ್ಟು, ನೆಮ್ಮದಿಯಿಂದ ಬಾಳುವ ಯೋಚನೆ ಮಾಡಿದ್ದೆ—ಹುಂ ! ಆದರೆ—ವಿಧಿ ಅದನ್ನು ಆಗಗೊಡಲಿಲ್ಲ "—

—ಎಂದು ಹೇಳಿ, ಬಂಪಸನ ಕಡೆತಿರುಗಿ, " ಏನು ಹೇಳುತ್ತಿ—ಬಂಪಸ್ ? ನೀನು ಇಲ್ಲೇ, ಒಂದೋ-ಎರಡೋ ವರ್ಷ ಇದ್ದುಬಿಡೋ ಮನಸ್ಸು ಮಾಡಬಲ್ಲೆಯಾ ?"

—ಎಂದು ಕೇಳಿದ. ಈಸಮಯದಲ್ಲಿ ನಮ್ಮ ಬಂಪಸ್ ಮಹಾಶಯ, ತನ್ನಮುಂದೆ ಪ್ರಸರಿಸಿದ್ದ ಭವ್ಯಮನೋಹರವಾದ ದೃಶ್ಯವನ್ನು ನೋಡುತ್ತ ಮೈಮರೆತಿದ್ದ ಕಾರಣ, ಅವನಿಗೆ ತನ್ನ ನಾಯಕ ಆಡಿದ ಮಾತುಗಳು ಸರಿಯಾಗಿ ಕೇಳಿಸಲಿಲ್ಲ. ಅನಸ್ತು,

" ಆ್ಞ !—ಏನಂದಿರಿ ಕಾಪ್ಟಿಂಗ್ ?"—ಎಂದು ಕೇಳಿದ.

"ನೀನು ಸ್ವಲ್ಪಕಾಲ ಇಲ್ಲೇ ಇದ್ದುಬಿಡೋದಕ್ಕೆ ಏನಾದರೂ ಆಕ್ಷೇಪಣೆ ಇದೆಯೇ-ಅಂತ ಕೇಳಿದೆ-ಜೋ"

" ಆಸ್ಕೇಪಣೆ ! ಅಯ್ಯೋ ದೇವರೇ ! ಕಾಪ್ಟಿಂಗ್, ನಾನು ಹೇಳೋದು ಏನೂ ಅಂತೀರೋ ?—ಏನೂ ಅಂದ್ರೆ—ನಾನು ಹುಟ್ಟಿ ಎಷ್ಟೋ ದಿನ ಆಗಿದೆಯಲ್ಲ-ಈಗ—ಆವಾಗಿನಿಂದ ಇಲ್ಲೀವರೆಗೆ—ಅಂದ್ರೆ ಈಗ ನಾವು ನಿಂತಿದ್ದೇವಲ್ಲ ಈ ಜಾಗಕ್ಕೆ ಬರೋವರೆಗೆ—ನಾನು ಇಂಥಾ ತರಹಾ ಜಾಗಾ ನೋಡಿ ಆಗಿದ್ದಿರಲೇ ಇಲ್ಲ-ದೇವರಾಣೆ ! ಸ್ವರ್ಗ ದೇಶದ ಒಂದು ಹಲ್ಲೆ —ತುಣುಕು ಇದ್ದಹಾಗಿದೆ—ಇದು ! ಈಗ ಆಡಮ್—ಈವ್†—ಗಳು ಇಬ್ರೂ ಈಗಲೇ ಇಲ್ಲಿ ಬಂದು ಬಿಟ್ಟರೆ—ತಮ್ಮ ಈಡನ್* ತೋಟಾಂತ ಮೋಸ ಹೋಗೇ ಬಿಟ್ಟಾರು ! ನನ್ನ ಲೆಕ್ಕಾಚಾರದಲ್ಲಿ—ಉಪ್ಪುನೀರಿನ ಬರೀ ನೀಲಿ-ಬಲು ಬೇಜಾರು ! ಅದಕ್ಕಿಂತ ಇದು ಹೆಚ್ಚು—ಬಹಳ-ಉಹುಂ—ಅದಕ್ಕಿಂತ, ಸ್ವಲ್ಪ ಜಾಸ್ತಿ ಸುಂದರವಾಗಿದೆ—" (ಇಲ್ಲಿ ಹೆನ್ರಿಯನ್ನುದ್ದೇಶಿಸಿ) "ನೋಡಿ—ಅಪ್ಪಾ, ನಿಮಗೆ ಯಾವ ಕೆಲಸ ಅಂದ್ರೆ ಆ ಕೆಲಸಕ್ಕೆ—ಸೈ—ಅನ್ನೋ

† Adam, Eve ಬೈಬಲ್ ಮತ್ತು ಕೊರಾನ್‌ಗಳಲ್ಲಿ ಉಕ್ತವಾಗಿರುವಂತೆ ಸ್ವರ್ಗಚ್ಯುತರಾಗಿ ಧರೆಗಿಳಿದ ಆದಿ ನರ ಮತ್ತು ನಾರಿ.

* Adam ಮತ್ತು Eve ವಾಸಿಸುತ್ತಿದ್ದ ಸ್ವರ್ಗೋದ್ಯಾನ

ಆಸಾಮಿ—ಒಂದು ತರಹ ‘ ಎಲ್ಲಾನೂ ಬಲ್ಲ; ಆದರೆ ಯಾತರಲ್ಲೂ ನಿಪುಣ ಅಲ್ಲ—’—ಅಂತಾರಲ್ಲ ಹಾಗೆ—ಅಂದರೆ—ನಾವಿಕನ ಕಸಬು ಒಂದು ಬಿಟ್ಟು—(ಅದಕ್ಕೆ ನೆಲದ ಮೇಲೆ ಏನೂ ಉಪಯೋಗ ಇಲ್ಲ ವಲ್ಲ !)—ಅಂಥಾ ಮನುಷ್ಯ ಒಬ್ಬ ಬೇಕಾಗಿದ್ದರೆ ಆ ಮನುಷ್ಯ ಯಾರು ಗೊತ್ತೇ ? ಜೋ ಬಂ-ಪ-ಸ್ !”

“ ನಿನ್ನ ಮಾತು ಕೇಳೋಕೆ ಬಹಳ ಸಂತೋಷ, ನನಗೆ-ಜೋ. ಇಲ್ಲಿ ಕಪ್ಪು ದಸ್ಯು ಜನರ ಗುಂಪುಗಳಿಗೆ, ಯಾವಾಗಲೂ ತಮ್ಮ ತಮ್ಮಲ್ಲೇ ಕಾದಾಡೋದೇ ಕೆಲಸ. ಅಷ್ಟೇ ಅಲ್ಲ—ಕಾದೋ ಅಭ್ಯಾಸ ತಪ್ಪಬಾರದು—ಅಂತ, ಅವರು ನಮ್ಮ ಮೇಲೂ ಬಿದ್ದು-ನಮ್ಮನ್ನ ಕೊಂದು ತಿನ್ನೋಕೂ ಹೇಸೊಲ್ಲ ! ಅಂಥಾ ಕೇಡಿಗ ಜನರ ಗುಂಪು ಗಳಿವೆ ಈ ದ್ವೀಪದಲ್ಲಿ. ಆದ್ದರಿಂದ, ಈ ಕಾಲದಲ್ಲಿ ನಿನ್ನಂಥಾ ಬಿಳೀ ಜನರ ಸಹಾಯ ಬಹಳ ಬೇಕು ನಮಗೆ ”—ಎಂದು ನಗುತ್ತ ಹೇಳಿದ, ಹೆನ್ರಿ.

“ ನನ್ನಂಥಾ ಬೆಳ್ಳೀ ಜನ! ”

—ಎಂದು ಆಶ್ಚರ್ಯವನ್ನು ತೋರಿ, ತನ್ನ ಮುಖಕ್ಕಿಂತಲೂ ಸ್ವಲ್ಪ ಅಚ್ಚ ಕಂದು ವರ್ಣಕ್ಕೆ ತಿರುಗಿದ್ದ-ಕಬ್ಬಿಣದಂಥ ತನ್ನ ಮುಂದೋಳು-ಕೈಗಳನ್ನು ನೋಡಿಕೊಳ್ಳುತ್ತ, ಬಂಪಸ್,

“ ಆಹಾ ! ಇದೀಗ ಸರಿ ! ನಾನು ಬೆಳ್ಳೀ ಮನುಷ್ಯನಾಗಿದ್ದರೆ, ಇನ್ನು ಯಾವುದನ್ನ ಕಪ್ಪು-ಅಂತ ಕರೀತೀರೋ-ಗೊತ್ತಾಗೋದಿಲ್ಲ ವಲ್ಲ ! ಹ ಹ್ಹ ಹ್ಹ ಹ್ಹಾ ! ”

—ಎಂದು ನಕ್ಕ. ಹೆನ್ರಿ ಹೇಳಿದ :

“ ಮನುಷ್ಯನ ವರ್ಣ-ಜಾತಿ-ಗೀತಿ ಎಲ್ಲ ಗೊತ್ತು ಮಾಡೋದು ಮೇಲಿನ ಚರ್ಮ ಅಲ್ಲ-ಜೋ,ಒಳಗಿನ ರಕ್ತ ! ನೋಡು, ನಮ್ಮ ಕ್ಯಾಪ್ಟನ್ ಗ್ಯಾಸ್ಕೋಯಿನ್ ನಿನ್ನನ್ನ ಬಿಟ್ಟು ಕೊಡೋದಾದರೆ— ನಿನಗೆ ಇಲ್ಲೇ—ಸೊಗಸಾದ ಕೆಲಸ—ನೀನು ಒಪ್ಪೋ ಅಂಥಾದ್ದು— ಲಾಭಕರವಾದ್ದು—ಕೊಡಬಲ್ಲೆ. ಇಲ್ಲಿ ಎಲ್ಲಾ ತರಹಾ ಕೆಲಸಾನೂ ಬೇಕಾದಷ್ಟಿದೆ.”

" ಮಹಾಶಯರೇ, ನೋಡಿ, ಇದೊಂದು ಸಲ ಮಾತ್ರ-ನಾಟಕದ ಚೀಟಿಗಳಲ್ಲಿ ಇರತ್ತಲ್ಲ ಹಾಗೆ-ಇದೊಂದೇ ಸಲ ಮಾತ್ರ-ನಾನು, ಮಿಸ್ಟರ್ ಜಾನ್ ಬಂಪಸ್ !—ಹರಾಜಿನ ಮಾಲು ಆಗೋಕೆ ಸಮ್ಮತಿ ಮಾಡುತ್ತೀನಿ. ನೀವಿಬ್ಬರೂ ಸವಾಲು ಮಾಡಿ; ಯಾರದ್ದು ಹೆಚ್ಚೋ ಅವರಿಗೆ—ನಾನು ವಶ ! "—

—ಎಂದು, ಬಹಳ ಗಂಭೀರವಾಣಿಯಿಂದ ಹೇಳಿದ, ಜೋ ಬಂಪಸ್. ಇದನ್ನು ಕೇಳಿ ಕ್ಯಾಪ್ಟನ್ ಗ್ಯಾಸ್ಕೋಯಿನ್, ಹೇಳಿದ :

" ಇಲ್ಲ, ಇಲ್ಲ, ಬಂಪಸ್ !—ಕೂಡದು ! ನೀನು ನನ್ನ ಜೀತಕ್ಕೆ ಒಪ್ಪಿ ಮಾರಿಕೊಂಡಿದ್ದೀಯೆ ! ಮರೀ ಬೇಡ ! ಆದ್ದರಿಂದ ನನ್ನ ಅಪ್ಪಣೆ ಪ್ರಕಾರ ನೀನು ನಡೆದುಕೊಳ್ಳಬೇಕು."

" ಓಹೋ ! ಅಪ್ಪಣೆಯೋ !—ಒಳ್ಳೇದು-ಒಳ್ಳೇದು !! ಬಹಳ ಒಳ್ಳೇದು ! ಎಷ್ಟುಬೇಕಾದರೂ ಅಪ್ಪಣೆಯಾಗಲಿ—ಸವಾಲು ! "

"ಇಲ್ಲಿ ನೋಡಿ ಕ್ಯಾಪ್ಟನ್, ಸುಮ್ಮನೆ ಹಟ ಏಕೆ ಮಾಡುತ್ತೀರಿ? ಬೇಡ. ದಯವಿಟ್ಟು ಅವನನ್ನು ನನಗೆ ಬಿಟ್ಟು ಕೊಡಿ; ಅವನ ಬದಲು ಏನು ಬಯಸುತ್ತೀರೋ ಹೇಳಿ "-ಎಂದ, ಹೆನ್ರಿ ಸ್ಟೂಯರ್ಟ್.

"ಉಹುಂ ! ಇವನನ್ನು ಯಾವ ಬೆಲೆಗೂ ಮಾರಲು ಸಾಧ್ಯವಿಲ್ಲ. ಸ್ಯಾಂಡಿ ಕೊಲ್ಲಿಯ ಬಳಿ ಒಬ್ಬ ವಿಧವೆ ವಾಸವಾಗಿದ್ದಾಳೆ. ಅವಳ ಹೆಸರು ಮೇರೀ ಸ್ಟೂಯರ್ಟ್—ಅಂತ—ಅವಳು ಸ್ಕಾಟ್ಲೆಂಡಿನ ರಾಣಿಯಲ್ಲ ನಿಜ; ಆದರೆ, ಅದಕ್ಕೂ ಹೆಚ್ಚಾಗಿ, ಅವಳು ಇಡೀ ಸ್ತ್ರೀ ಜಾತಿಗೇ ರಾಣೀ ರತ್ನ! ಇವನನ್ನು ಅವಳಿಗಾಗಿಯೇ ಉದ್ದೇಶಪಟ್ಟು —ಒಂದು ರೀತಿ—ಉಡುಗೆರೆ—"

" ಏನು ?—ನನ್ನ ತಾಯಿಗೆ ? "—

—ಎಂದು, ಮಧ್ಯೆ ಬಾಯಿ ಹಾಕಿ ಕೇಳಿದ, ಹೆನ್ರಿ. ಕ್ಯಾಪ್ಟನ್ ಗ್ಯಾಸ್ಕೋಯಿನ್, ತನ್ನ ತಾಯ ಹೆಸರನ್ನು ಇಷ್ಟು ಸಲಿಗೆಯಿಂದ ಉಚ್ಚರಿಸುತ್ತ ಮಾತನಾಡಿದುದು ಹೆನ್ರಿಗೆ ಸಹಿಸಲಿಲ್ಲ. ಅವನ ಮುಖದ ಮೇಲೆ ಅಸಮಾಧಾನದ ಛಾಯೆ ಸುಳಿಯಿತು.

" ಹುಂ, ಹೌದು, ಅವಳೇ. ಇಲ್ಲಿರೋ ಬಿಳೀ ಜನರಿಗೆ ಇಲ್ಲಿಯ

ಕಾಡು ಜನರ ಹಾವಳಿ ಬಹಳವಾಗಿದೆ. ಆದ್ದರಿಂದ ಅವಳ ರಕ್ಷಣೆಗೆ, ಹತ್ತಿರ ಒಬ್ಬ ಬಲವಾದ—ಯೋಗ್ಯನಾದ ಗಂಡಾಳು ಇರೋದು ಅವಶ್ಯಕ ಎಂದು ತೋರಿತು. ಅಂಥಾವನು ಒಬ್ಬನನ್ನು ತಂದು ಕೊಡೋದಾಗಿ—ನಾನು ಇಲ್ಲಿಗೆ ಹೋದಸಲ ಬಂದಾಗ ಅವಳಿಗೆ ಮಾತು ಕೊಟ್ಟಿದ್ದೆ. ಬಂಪಸಿಗೆ, ಇಲ್ಲಿ ತನ್ನ ಅದೃಷ್ಟ ಪರೀಕ್ಷೆ ಮಾಡೋ ಮನಸ್ಸಿದ್ದರೆ, ಇರಲಿ. ಮೇರಿ ಸ್ಟ್ಯುಯರ್ಟ್ ಬಹಳ ಒಳ್ಳೇ ಸ್ತ್ರೀ; ಬಂಪಸಿಗೆ ಒಳ್ಳೇ ಯಜಮಾನಿಯಾಗಿರುತ್ತಾಳೆ; ಅವಳ ಮನೆಯಲ್ಲಿ ಅವನು ಬಹಳ ಸುಖವಾಗಿರಬಹುದು—ಅಂತ ನಾನು ಭರವಸೆ ಕೊಡಬಲ್ಲೆ."

ಈ ಮಾತುಗಳನ್ನು ಕೇಳಿ, ಉರುಳುವ ಹಾಗೆ ಹೆಜ್ಜೆ ಹಾಕುತ್ತಿದ್ದ ಠೊಣೆಯ ಬಂಪಸ್, ಇದ್ದಕ್ಕಿದ್ದ ಹಾಗೇ ನಿಂತು, ತನ್ನ ನಾಯಕನ ಮುಖವನ್ನೇ ದಿಟ್ಟಿಸಿ ನೋಡುತ್ತ—ಹುಬ್ಬುಗಳನ್ನೆತ್ತಿ—ಆಶ್ಚರ್ಯದಿಂದ,

"ಹಾಗಾದರೆ—ಕಾಪ್ಟಿಂಗ್, ಒಬ್ಬ ಹೆಂಗಸಿಗೆ ನನ್ನ ಮಾರಾಟವೋ?"—

—ಎಂದು ಕೇಳಿದ. ಗ್ಯಾಸ್ಕೋಯಿನ್, ಮುಗುಳುನಗೆ ನಗುತ್ತ, "ಹೌದು—ಸಂಪೂರ್ಣವಾಗಿ, ನಿನ್ನ ಸ್ವಸಮ್ಮತಿಯಿಂದ—ಮಾಸ್ಟರ್ ಬಂಪಸ್"—ಎಂದ. ಹೆನ್ರಿ, ಸಂತೋಷದಿಂದ,

"ಬಾ—ಬಾ, ಜೋ; ಈ ಏರ್ಪಾಟು ನಿನಗೆ ಇಷ್ಟವಾಗಿರೋ ಹಾಗಿದೆ. ನಾವಿಬ್ಬರೂ ಇಲ್ಲಿ ಒಳ್ಳೆ ಸ್ನೇಹದಿಂದ—ಸುಖವಾಗಿ—ಸಂತೋಷವಾಗಿರಬಹುದು—ಬಾ, ಎಲ್ಲಿ, ನಿನ್ನ ಪಂಜ ಕೊಡು ಮಿತ್ರಾ!"

ಗಾತ್ರದಲ್ಲೂ-ಆಕಾರದಲ್ಲೂ, ಅವನಿಗಿಂತ ಸಮುದ್ರ ಸಿಂಹಕ್ಕೇ ಹೆಚ್ಚು ಶೋಭಾಯಮಾನವಾಗಿದ್ದ ಎರಡು "ಪಂಜ"ಗಳ ಪೈಕಿ ಒಂದನ್ನ ಜಾನ್‌ಬಂಪಸ್ ಮುಂದಕ್ಕೆ ಚಾಚಿದ. ಹೆನ್ರಿ ಅದನ್ನು ಹಿಡಿದು ಆದರದಿಂದ ಕುಲಕಿದ.

ಅರ್ಧ ಗಂಟೆ ತರುವಾಯ ಮೂರು ಮಂದಿಯೂ ಸ್ಯಾಂಡೀಕೊಲ್ಲಿ ಪಾಳೆಯವನ್ನು ತಲುಪಿದರು. ಸ್ಯಾಂಡೀಕೊಲ್ಲಿ ಪಾಳೆಯು, ಈ

ದ್ವೀಪದ ಸ್ಯಾಂಡೀ ಕೊಲ್ಲಿ ಎಂಬ ಸಮುದ್ರಭಾಗಕ್ಕೆ ಸಮೀಪದಲ್ಲಿದ್ದ ಒಂದು ಸಣ್ಣ ವಸಾಹತು. ಇಲ್ಲಿ ಒಂದು ಭಾಗದಲ್ಲಿ ಸ್ಥಳದ ಜನರೂ, ಇನ್ನೊಂದು ಭಾಗದಲ್ಲಿ ಮತಪ್ರಚಾರಕ್ಕೆ ಬಂದಿದ್ದ ಬಿಳಿಯರ ಕ್ರೈಸ್ತ ಮಿಶನರಿಗಳೂ ವ್ಯಾಪಾರಿಗಳೂ ನೆಲಸಿದ್ದರು.

---

೪

## ಒಂದು ರಹಸ್ಯ

ಸ್ಯಾಂಡಿಕೊಲ್ಲಿ ಪಾಳೆಯದ ಒಂದು ಭಾಗದಲ್ಲಿ ವಾಸಿಸುತ್ತಿದ್ದ ಸ್ಥಳದ ಜನರು, ಕ್ರಿಸ್ತಮತವನ್ನವಲಂಬಿಸಿದ ದ್ವೀಪದ ಮೂಲನಿವಾಸಿಗಳಾಗಿದ್ದರು. ಇವರು, ಬಿಳಿ ಮಿಶನರಿಗಳ ಬೋಧನೆ—ಸಹವಾಸ—ಸಂಪರ್ಕಗಳಿಂದ, ಕ್ರಮೇಣ ಪಾಶ್ಚಾತ್ಯ ನಾಗರಿಕತೆಯನ್ನು ಪಡೆಯುತ್ತಿದ್ದರು. ಇನ್ನೊಂದು ಭಾಗದಲ್ಲಿ, ಮತಪ್ರಚಾರಕ್ಕೆ ಬಂದ ಮಿಶನರಿಗಳ ಜೊತೆಗೆ, ಯೂರೋಪಿನಿಂದ ಬಂದು ನೆಲೆಸಿದ್ದ ಕೆಲವು ವ್ಯಾಪಾರಿಗಳೂ ಇದ್ದರು. ದಕ್ಷಿಣ ಸಮುದ್ರಗಳಿಗೆ ಹೋಗಿಬರುತ್ತಿದ್ದ ಅನೇಕ ಹಡಗುಗಳು, ಮಾರ್ಗಮಧ್ಯದಲ್ಲಿದ್ದ ಈ ದ್ವೀಪಕ್ಕೆ ಆಗಿಂದಾಗ್ಯೆ ಬಂದು ಹೋಗುತ್ತಿದ್ದುದರಿಂದ, ಯೂರೋಪಿನ ವರ್ತಕರು ಇಲ್ಲಿಗೆ ಬಂದು—ನೆಲೆಸಿ—ಅನೇಕ ಅಂಗಡಿ—ಮಳಿಗೆ—ಗಡಂಗು—ಮುಂತಾದುವನ್ನು ಸ್ಥಾಪಿಸಿದ್ದರು.

ಪೆಸಿಫಿಕ್ ಸಾಗರದ ಅನೇಕ ದ್ವೀಪಗಳಲ್ಲಿ, ಕ್ರಿಸ್ತಮತಪ್ರಚಾರ ಬಹಳ ಪೂರ್ವಕಾಲದಿಂದಲೇ ನಡೆದು ಬಂದಿದ್ದರೂ, ಮುಖ್ಯವಾಗಿ ಈ ದ್ವೀಪದಲ್ಲಿ, ಅದರಲ್ಲೂ ಈ ಕಥೆಯ ಕಾಲದಲ್ಲಿ, ಮಿಶನರಿಗಳ ಕೆಲಸ ಅಷ್ಟು ಸುಗಮವಾಗಿರಲಿಲ್ಲ. ಈ ದ್ವೀಪದ ಮೂಲ ನಿವಾಸಿಗಳಾದ ಅನಾಗರಿಕ ಕಪ್ಪುಜನ, ಅನೇಕಾನೇಕ ತಂಡಗಳಾಗಿ ಬೇರ್ಪಟ್ಟಿದ್ದರು. ಪ್ರತಿ ತಂಡಕ್ಕೂ ಒಬ್ಬ ನಾಯಕನಿರುತ್ತಿದ್ದ. ಈ ತಂಡಗಳ ಪೈಕಿ

ಕ್ರಿಸ್ತಮತವನ್ನು ಒಪ್ಪಿ—ಅಪ್ಪಿಕೊಂಡವು ಕೆಲವಿದ್ದರೆ—ಒಪ್ಪಿಕೊಳ್ಳದೆ—ಅದಕ್ಕೆ ವಿರೋಧವಾಗಿ—ಮಿಶನರಿಗಳ ಕೆಲಸಕ್ಕೆ ಅಡ್ಡಿಮಾಡುತ್ತಿದ್ದ ತಂಡಗಳು ಹಲವು ಇದ್ದವು. ಒಪ್ಪಿಕೊಂಡ ತಂಡದವರು, ಪೂರ್ವ ದಿಂದಲೂ ನಡೆದುಬಂದಿದ್ದ ತಮ್ಮ ಪದ್ಧತಿ—ಕುಲಾಚಾರ—ವಿಗ್ರಹಾರಾಧನೆ—ಭೂತಪಿಶಾಚಿಗಳ ಪೂಜೆ—ಹಬ್ಬ—ಕುಣಿತ ಮುಂತಾದುವನ್ನೆಲ್ಲಾ ಬಿಟ್ಟು, ಕ್ರಿಸ್ತ ಮಿಶನರಿಗಳು ತೋರಿಸಿದ ಮಾರ್ಗದಲ್ಲಿ ನಡೆಯುತ್ತಿದ್ದರು. ಇವು ಯಾವುದನ್ನೂ ಬಿಡಲು ಇಷ್ಟವಿಲ್ಲದ ತಂಡದವರು—ತಮ್ಮ ಒಟ್ಟು ಬಾಳಿನಿಂದ ಬೇರೆಯಾಗಿ, ಕ್ರೈಸ್ತರಾದ ತಂಡದವರ ಮೇಲೆ—ಸದಾ ದ್ವೇಷಮಾಡುತ್ತ-ಕಾದಾಡುತ್ತ—ರಕ್ತಪಾತ ಮಾಡುತ್ತಲೇ ಇದ್ದರು. ಇವರ ಕಾದಾಟ, ಕೊನೆ ಮೊದಲೇ ಇಲ್ಲದೆ, ಅನೇಕ ವರ್ಷಗಳಿಂದ—ಒಮ್ಮೊಮ್ಮೆ ಹೆಚ್ಚುತ್ತ-ಒಮ್ಮೊಮ್ಮೆ ತಗ್ಗುತ್ತ, ನಡೆದುಕೊಂಡು ಬಂದಿತ್ತು.

ಈ ದ್ವೀಪದಲ್ಲಿ—ಇಂತಹ ಆತಂಕ—ಅಡ್ಡಿ—ಶ್ರಮ ಹಾಗೂ ಅಪಾಯಗಳ ನಡುವೆ, ಮಿಶನರಿಯ ಕೆಲಸ ಸುಗಮವಾಗಿರಲು ಸಾಧ್ಯವಿರಲಿಲ್ಲ. ಆದರೂ ಇಲ್ಲಿ ಬಂದು—ನೆಲಸಿ ಕೆಲಸಮಾಡುತ್ತಿದ್ದ, ಕ್ರಿಸ್ತಮತಪ್ರಚಾರಕ **ರೆವೆರೆಂಡ್** ಫ್ರೆಡೆರಿಕ್ ಮೇಸನ್, ಇಲ್ಲಿಯ ಸಂದಿಗ್ಧ ಪರಿಸ್ಥಿತಿಗೆ ಒಪ್ಪತಕ್ಕ ವ್ಯಕ್ತಿಯಾಗಿದ್ದ. ಧೀರವಾದ ಆಕೃತಿ—ಮುಖದಲ್ಲಿ ಪೌರುಷಕಳೆ—ಧೈರ್ಯ—ಸ್ಥೈರ್ಯ ಇವುಗಳಿಂದ ಅವನು ಮಿಶನರಿಗಿಂತ ಯೋಧನನ್ನೇ ಹೆಚ್ಚಾಗಿ ಹೋಲುತ್ತಿದ್ದ.

ಈ ಕಥೆ ಪ್ರಾರಂಭವಾಗುವುದಕ್ಕೆ ಆರು ವರ್ಷಗಳ ಹಿಂದೆ, ರೆವೆರೆಂಡ್ ಮೇಸನ್, ತನ್ನ ಹೆಂಡತಿ ಮತ್ತು ಒಂದೇ ಮಗು—(ಆಗ ಆರುವರ್ಷಗಳಾಗಿದ್ದ ಮಗಳು) ಇವರೊಡನೆ ಸ್ಯಾಂಡೀಕೊಲ್ಲಿ ಪಾಳೆಯಕ್ಕೆ ಬಂದು ನೆಲೆಸಿದ್ದ. ಬಂದ ವರ್ಷಕ್ಕೇ ಇವನ ಹೆಂಡತಿ ಕಾಲವಾದಳು. ಸುಮಾರು ಇದೇ ಸಮಯದಲ್ಲಿ, ಈ ದ್ವೀಪದ ಮೂಲನಿವಾಸಿಗಳ ತಂಡಗಳಲ್ಲಿ, ವಿರೋಧವಿದ್ದ ಬೇರೆ ಬೇರೆ ಪಂಗಡಗಳ ಮಧ್ಯೆ, ಮೊಟ್ಟಮೊದಲಿಗೆ ಕದನ ಪ್ರಾರಂಭವಾಗಿ, ಮೇಲೆ ತಿಳಿಸಿದಂತೆ, ತಡೆತಡೆದು ನಡೆದುಕೊಂಡೇ ಬಂದಿತ್ತು.

ಈ ಮಿಶನರಿ ಬಂದ ಹಡಗಿನಲ್ಲೇ, ಮಿಸೆಸ್ ಸ್ಟೂಯರ್ಟ್ ಎಂಬ ವಿಧವೆಯೂ, ಅವಳ ಮಗ ಹದಿಮೂರು ವರ್ಷಗಳ ಹೆನ್ರಿಯೂ ಈ ದ್ವೀಪದಲ್ಲಿ ನೆಲೆಸುವುದಕ್ಕೆ ಬಂದಿದ್ದರು. ಇಲ್ಲಿಗೆ ಬಂದ ಕೂಡಲೆ, ಮಗ, ತಾಯಿಯ ವಾಸಕ್ಕೆ--ಬಿಳಿಯರ ವಸತಿಯಲ್ಲೊಂದು ಕಡೆ ಒಂದು ಸಣ್ಣ ಗುಡಿಸಲನ್ನು ಕಟ್ಟಿದ. ಇದು ನೋಡುವುದಕ್ಕೆ ಒರಟಾಗಿದ್ದರೂ—ವಾಸಕ್ಕೆ ಯೋಗ್ಯವಾಗಿತ್ತು. ಕ್ರಮೇಣ –ಅವಶ್ಯ ಬಿದ್ದ ಹಾಗೆಲ್ಲ ಇದಕ್ಕೆ ಕೊಠಡಿಗಳನ್ನು ಸೇರಿಸಿ--ತಕ್ಕ ಮಟ್ಟಿಗೆ ಅನುಕೂಲವಾದ ಪುಟ್ಟ ಮನೆಯನ್ನೇ ಮಾಡಿಕೊಂಡರು.

ಮಿಶನರಿಯು ಜೊತೆಯಲ್ಲೇ ಬಂದ ಈ ವಿಧವೆ, ಅವನ ಮನೆವಾರ್ತೆಗೆ ಸೇರಿದವಳಾಗಿರಲಿಲ್ಲ; ಅಥವಾ ಅಧಿಕೃತವಾಗಿ ಅವನ ಕೆಲಸದಲ್ಲಿ ಸಹಾಯಕಳಾಗಿರಲಿಲ್ಲ. ಆದರೂ ಹೆಂಗಸು, ತುಂಬಾ ದಕ್ಷಳಾಗಿದ್ದಳು. ಸ್ಥಳದ ಜನರ ಭಾಷೆಯನ್ನು ಬಹು ಬೇಗ ಕಲಿತು, ರೆವೆರೆಂಡ್ ಮೇಸನ್ ಸ್ಥಾಪಿಸಿದ ಶಾಲೆಗಳಲ್ಲಿ ಪಾಠ ಹೇಳಿಕೊಡುತ್ತಿದ್ದಳು. ತಕ್ಕಮಟ್ಟಿಗೆ ಬಿಳಿಯ ಮತ್ತು ಕಪ್ಪು ಜನರಿಂದ ಕೂಡಿದ್ದ ಈ ಪಾಳೆಯದಲ್ಲಿ, ಭೇದವಿಲ್ಲದೆ ಈಕೆ ದುಃಖಿತರನ್ನು ಸಂತೈಸುತ್ತಿದ್ದಳು. ಕಷ್ಟದಲ್ಲಿದ್ದವರಿಗೂ ರೋಗಿಗಳಿಗೂ ತನ್ನ ಕೈಲಾದ ಸಹಾಯ—ಸೇವೆಗಳನ್ನು ಸಂತೋಷ ಚಿತ್ತದಿಂದ ಮಾಡುತ್ತಿದ್ದಳು. ಮರಣಶಯ್ಯೆಯಲ್ಲಿದ್ದವರು, ಇವಳ ಇದಿರಲ್ಲಿ ನೆಮ್ಮದಿಯಿಂದ ಪ್ರಾಣ ಬಿಡುತ್ತಿದ್ದರು. ಪಾಳೆಯದವರೆಲ್ಲ, ಇವಳನ್ನು, ತಮ್ಮ ಭಾಗಕ್ಕೆ ದೇವರು ಕಳಿಸಿದ ದೂತಿಯೆಂದು ಭಾವಿಸತೊಡಗಿದರು.

ಗುಣವಂತೆಯಾಗಿದ್ದ ಈಕೆ, ಹೂವಿನಂತೆ ಕೋಮಲವಾದ ಶರೀರವುಳ್ಳವಳಾಗಿದ್ದಳು. ಶುಭ್ರವಾದ ಗೌರವರ್ಣದಿಂದ ಕೂಡಿದ್ದಳು. ಆದರೆ, ಏನೋ ಒಳಗಿನ ಆತಂಕದಿಂದ, ಇವಳ ಹಣೆಯಲ್ಲಿ ಸುಕ್ಕಿನ ಗೆರೆಗಳು ಮೂಡಿದ್ದವು. ಇವು ಹೊರತು, ಇವಳ ಮುಖ ಧೀರವಾಗಿಯೂ ಗಂಭೀರವಾಗಿಯೂ, ತೇಜೋಮಯವಾಗಿಯೂ ಇದ್ದು, ಒಂದು ಕಾಲದಲ್ಲಿ ಈಕೆ ಅತ್ಯಂತ ಸುಂದರಿಯಾದ ತರುಣಿಯಾಗಿದ್ದಳೆಂದು ತೋರು

ತ್ತಿತ್ತು. ಬೆಳದಿಂಗಳಂತೆ ಸೌಮ್ಯವಾಗಿದ್ದ ಅವಳ ನೋಟದಲ್ಲಿ, ಪ್ರೀತಿ-ವಾತ್ಸಲ್ಯ ಕರುಣೆ—ಸಹಾನುಭೂತಿ ಇವು ಸದಾ ಸೂಸುತ್ತಿದ್ದವು.

* * * "

ನಮ್ಮ ಮೂರು ಜನ ಗೆಳೆಯರೂ ಅವರ ಮುಂದೆ ಮಿಸೆಸ್ ಸ್ಟೂಯರ್ಟ್ ತಂದಿಟ್ಟ "ರೊಟ್ಟಿ ಹಣ್ಣು,*" ಮತ್ತು "ಬೇಕನು"† ಗಳಿಗೆ ತಕ್ಕ ಶಾಸ್ತಿ ಮಾಡುತ್ತಿದ್ದರು! ಮಗನೂ ಅತಿಥಿಗಳೂ ತಿಂಡಿ ತಿನ್ನುತ್ತಿದ್ದ ಸಮಯದಲ್ಲಿ, ಮೇರೀ ಸ್ಟೂಯರ್ಟಳ ಹೃದಯದಲ್ಲಿ ಏನೋ ಕಳವಳವೋ—ಆತಂಕವೋ—ದುಃಖವೋ ಉಂಟಾಗಿ, ಅದರ ದೆಸೆಯಿಂದ ಆಕೆಯ ಎದೆ, ಎರಡು ಮೂರು ಸಲ—ಬಿರಿಯುವುದೋ ಎಂಬಂತೆ ಉಬ್ಬಿ ಉಬ್ಬಿ ಕುಗ್ಗಿತು. ತಾನು ಅನುಭವಿಸುತ್ತಿದ್ದ ಹೃದಯ ಯಾತನೆಯನ್ನು ತಡೆಗಟ್ಟಲು, ಆಕೆ ಬಹಳ ಸಾಹಸಪಡುತ್ತಿದ್ದಂತೆ ತೋರುತ್ತಿತ್ತು. ಅವರ ಮುಂದೆ ಕುಳಿತಿರಲಾರದೆ, ಏನೋ ಮನೆಗೆಲಸದ ನೆವ ಮಾಡಿಕೊಂಡು, ಎದ್ದು ಎದ್ದು ಹೋಗುವಂತೆ ಮಾಡುತ್ತಿತ್ತು, ಅವಳ ಹೃದಯದ ಉದ್ವೇಗ. ಈ ಮೊದಲೇ ಅವಳ ವಿಷಯವಾಗಿ, ಅತಿ ಸದರದಿಂದ ಮಾತನಾಡಿದ್ದ ಗ್ಯಾಸ್ಕೋಯಿನಿನ ಮೇಲೆ ಕುಪಿತನಾಗಿದ್ದ ಹೆನ್ರಿ, ಈಗ, ಅವನ ಎದುರಲ್ಲಿ ತನ್ನ ತಾಯಿಗೆ ಉಂಟಾಗಿದ್ದ ಸ್ಥಿತಿಯನ್ನು ಗಮನಿಸದೆ ಹೋಗಲಿಲ್ಲ. ಇದರಿಂದ ಅವನ ಸಂಶಯದ ಮೊಳಕೆಗೆ ನೀರೆರೆದ ಹಾಗಾಯಿತು. ಅವರು ಇನ್ನೂ ತಿಂಡಿ ತಿನ್ನುತ್ತಿದ್ದಾಗ, ಮೇರೀ ಸ್ಟೂಯರ್ಟ್ ಏನೋ ನೆವದಿಂದ ಎದ್ದು ಮನೆಯೊಳಕ್ಕೆ ಹೋದಳು. ಆಗ್ಗ ಹೆನ್ರಿಯೂ ಏನೋ ನೆವದ ಮೇಲೆ ಎದ್ದು ಅವಳನ್ನು ಹಿಂಬಾಲಿಸಿದ. ಅವಳು ಮನೆಯ ಹಿಂಭಾಗದಲ್ಲಿ ಪ್ರತ್ಯೇಕವಾಗಿದ್ದ ಒಂದು ಕೊಠಡಿಗೆ—ಹೊಸದಾಗಿ ಹಾಲು ಕರೆದು ತರುವುದಕ್ಕೆ ಹೋಗಿದ್ದಳು. ಹೆನ್ರಿ ಅಲ್ಲಿಗೆ ಹೋಗಿ, ಅವಳನ್ನು ಕಂಡು

* Bread fruit—ಒಂದು ಜಾತಿಯ ಮುಳ್ಳುಮೈಯಿನ ಹಣ್ಣು.

† Bacon—ಉಪ್ಪು ಹಾಕಿ ಒಣಗಿಸಿದ ಹಂದಿಯ ಮಾಂಸ.

ಬಹಳ ವಿನಯದಿಂದ "ಅಮ್ಮಾ," ಎಂದ. ಆದರೂ ಅವನ ಧ್ವನಿಯಲ್ಲಿ, ಈಗ—ಹಿಂದೆಂದೂ ಕಾಣದ ಏನೋ ಒಂದು ತರಹ ಅಸಾಧಾರಣ ಗಡುಸುಭಾವವಿತ್ತು ನೇರವಾಗಿ ತಾಯಿಯ ಕಣ್ಣುಗಳನ್ನೇ ನೋಡುತ್ತ, ಮಗ,

"ಅಮ್ಮಾ, ಈ ಮನುಷ್ಯ ಇದ್ದಾನಲ್ಲ-ಗ್ಯಾಸ್ಕೋಯಿನ್-ಯಾರಿವನು? ಇವನ ವಿಷಯ ಏನೋ ಗೂಢವಾದ ರಹಸ್ಯ ಇರೋಹಾಗಿದೆ. ನಿನಗೆ ಅದರ ವಿಷಯ ತಿಳಿದಿರಬೇಕು: ನನಗೆ ಗೊತ್ತು; ಅದೇನು ಹೇಳು—ನಾನೂ—"—ಎನ್ನುವಷ್ಟರಲ್ಲಿ. ಅವನ ತಾಯಿ,

"ಮಗು—ಹೆನ್ರಿ, ಬೇಡ; ಇದೊಂದು ಮಾತು ನನ್ನ ಒತ್ತಾಯ ಮಾಡಬೇಡ!—ಬೇಡಿಕೋತೀನಿ—ಇದನ್ನ ಮಾತ್ರ ನಾನು ಬಾಯಿ ಬಿಡಲಾರೆ!"—

—ಎಂದಳು. ಹೀಗೆ ಹೇಳುವಾಗ ಅವಳ ಕೆನ್ನೆಗಳು ಬಿಳುಪಾದವು. ಈ ಮಾತು ಹೆನ್ರಿಗೆ ತೃಪ್ತಿಕರವಾಗಿರಲಿಲ್ಲ.

"ಅಮ್ಮಾ, 'ಬಾಯಿಬಿಡಲಾರೆ'—ಅಲ್ಲ-'ಬಿಡಲೊಲ್ಲೆ'—ಅನ್ನು"

"ಧೈರ್ಯಮಾಡಲು ಸಾಧ್ಯವಿದ್ದಿದ್ದರೆ ಹೇಳುತ್ತಿದ್ದೆ-ಮಗನೆ. ಈಗ ಬೇಡ; ಒಂದು ಕಾಲ ಬಂದೀತು—ಬರುತ್ತೆ, ಆಗ ನಾನು—"

"ಈಗಲೇ ಏಕೆ ಬೇಡ—ಅಮ್ಮಾ? ನಂಬಿಕೆಗೆ ತಕ್ಕ ವಯಸ್ಸಾಗಿದೆ—ನನಗೆ—ಅಲ್ಲವೆ? ಇಲ್ಲೀತನಕ ಆ ಮನುಷ್ಯ ಗ್ಯಾಸ್ಕೋಯಿನ್, ನಮ್ಮ ಬಳಿಗೆ ನಾಲ್ಕು ಸಲ ಬಂದು ಹೋಗಿದ್ದಾನೆ. ಅವನು ಬಂದಾಗಲೆಲ್ಲ ಎಷ್ಟು ಸದರ ಅವನಿಗೆ—ನಿನ್ನ ಹತ್ತಿರ! ಯಾರೊಬ್ಬನಿಗೂ ಇರಲಾಗದಂಥ—ಇರಕೂಡದಂಥ ಸ್ವಾತಂತ್ರ್ಯ—ಸಲಿಗೆ! ಆದರೆ ನಾನು ಕಂಡ ಹಾಗೇ ನೀನು, ಒಂದು ಮಾತೂ ಆಡದೆ, ಇದಕ್ಕೆ ಅವಕಾಶ ಕೊಡುತ್ತ ಬಂದಿದ್ದಿ! ಇಲ್ಲದೆ ಇದ್ದರೆ, ಯಾವನಿಗೆ ಬಂದೀತು—ಇಷ್ಟು ಧೈರ್ಯ! ಅವನು ನಿನ್ನನ್ನ 'ಮೇರೀ' ಅಂತ ಕರೆಯಬಹುದೇ-ಅಮ್ಮಾ? ಇದಕ್ಕೆ ಏಕೆ ಅವಕಾಶಕೊಟ್ಟಿದ್ದೀಯೆ—ನೀನು?-ನಮ್ಮ ಇಡೀ ಪಾಳಯದಲ್ಲಿ ಬೇರೆ ಯಾರೂ ನಿನ್ನನ್ನ ಹಾಗೆ ಕರೆಯುವುದಿಲ್ಲ"

—ಎಂದ ಹೆನ್ರಿ. ವಿಧವೆ ಸ್ವಲ್ಪ ವ್ಯಸನದ ದನಿಯಲ್ಲಿ,

" ಬಹಳ ದಿನಗಳಿಂದ ನನಗೂ ಅವನಿಗೂ ಗುರುತು ಪರಿಚಯ; ನಾವಿಬ್ಬರೂ ಒಟ್ಟಿಗೆ ಆಡುತ್ತಿದ್ದೆವು—ಮಗು "—ಎಂದಳು.

" ಹುಮ್‌ಮ್‌ಮ್ ! ಈ ಕಾರಣ ಇದ್ದರೂ ಇರಬಹುದು——ನಂಬೋಹಾಗಿದೆ. ಆದರೆ, ನಾನು ನೋಡಿದಹಾಗೆ—ನಿನಗೆ, ಅವನ್ನ ಕಂಡರೆ, ಅಷ್ಟೇನೂ ವಿಶ್ವಾಸ ಇದ್ದಹಾಗೆ ಕಾಣೋದಿಲ್ಲ. ಅಲ್ಲದೆ ಅವನು ಎದುರಿಗಿದ್ದಾಗ ನೀನು ಏನೋ ಸಂಕಟಾನೋ, ನೋವನ್ನೋ ಅನುಭವಿಸೋ ಹಾಗೆ ಕಾಣುತ್ತೆ. ಅವನಿಂದ ನಿನಗೆ ತೊಂದರೆ ಆಗೋಕೆ ನೀನು ಏಕೆ ಅವಕಾಶ ಕೊಡುತ್ತೀ ?........ಅಮ್ಮಾ, ನೋಡು, ನೀನು ಒಂದು ಮಾತು ಹೇಳಿದರೆ ಸಾಕು—ಅವನನ್ನು ಈ ಕ್ಷಣ—ಇಲ್ಲಿಂದ—ಕತ್ತು ಮಿಸುಕಿ ಒದ್ದು ಓಡಿಸಿಬಿಡುತ್ತೇನೆ—ಬೇಕಾದರೆ—''

" ಹುಶ್—ಶ್–ಮಗೂ ! ನೀನು ಎಷ್ಟು ಕಠಿಣ !—ಎಷ್ಟು ದುಡುಕುತ್ತೀ—ಹೆನ್ರಿ ! "

"ಏನಂದೆ ಅಮ್ಮಾ? 'ಎಷ್ಟು ಕಠಿಣ !—ಎಷ್ಟು ದುಡುಕುತ್ತಿ!'.... ಹುಂ !....ಅಮ್ಮಾ, ಹುಟ್ಟು ಹೇಡೀನೇ ಆಗಿರಲಿ—ಅವನ ತಾಯಿ—ಇಗೋ ಇವನಿದ್ದಾನಲ್ಲ ಗ್ಯಾಸ್ಕೋಯಿನ್ !—ಇವನಿಂದ ನೀನು ಹಿಂಸೆ ಅನುಭವಿಸುತ್ತಿರೋ ಹಾಗೆ—ಅನುಭವಿಸೋದನ್ನ ನೋಡಿದರೆ—ಎಂಥಾ ಹುಟ್ಟು ಹೇಡೀನೂ ಬೆಂಕಿ ಬೆಂಕಿಯಾಗುತ್ತಾನೆ ಅಮ್ಮಾ !.... ನನಗೇನೋ ಸ್ವಲ್ಪ ಅನು—"

"ಹೆನ್ರಿ ! ಹೆನ್ರಿ ! ನಿನ್ನ ತಾಯಿ ಎಂದಾದರೂ ಮಾಡಬಾರದ್ದನ್ನ ಮಾಡಿಯಾಳೂಂತ ನೀನು ಯೋಚಿಸುತ್ತೀಯಾ ?—ಮಗೂ ?"

ತಾಯಿಯ ಈ ಮಾತುಗಳನ್ನು ಕೇಳಿ ಮಗ, ಆಕೆಯ ಕೈಗಳನ್ನು ಹಿಡಿದು, ಆಕೆಯ ಹಣೆಯಮೇಲೆ ಸ್ವಲ್ಪ ರಭಸದಿಂದಲೇ ಮುತ್ತಿಟ್ಟು,

" ಅಮ್ಮಾ, ಇಲ್ಲ—ಇಲ್ಲ !—ದೇವರಾಣೆಗೂ ಇಲ್ಲ !—ಮೇಲೆ—ದೇವದೂತರಿದ್ದಾರಲ್ಲ—ಅವರು ಒಂದು ವೇಳೆ ಏನಾದರೂ ತಪ್ಪು ಕೆಲಸಮಾಡಿಯಾರು-ಅಂತ ನಂಬಿಯೇನು !-ಅಮ್ಮಾ, ನಿನ್ನ ವಿಷಯವಾಗಿ ಅಂಥಾ ಯೋಚನೆಯ ನೆರಳೂ ನನ್ನ ಮನಸ್ಸಿನಲ್ಲಿ ಸುಳಿಯ

ಲಾರದು !—ಎಂದೆಂದಿಗೂ ಸುಳಿಯುಲಾರದು ! . . .ಆದರೆ—ಅಮ್ಮ, ಅವನು ಯಾವುದೋ ರೀತೀಲಿ— ನಿನಗೆ—ಏನೋ ಸಂಕಟ ಉಂಟು ಮಾಡುತ್ತಾ ಇದಾನೆ; ಅದಕ್ಕೆ ನೀನು, ಏನು ಕಾರಣದಿಂದಲೋ, ಅವ ಕಾಶಕೊಡುತ್ತಿದ್ದೀಯೆ; ಇದು ನನ್ನ ಮನಸ್ಸಿಗೆ ಖಂಡಿತವಾಗಿ ಬಿಟ್ಟದ್ದೆ. ....ಹುಂ !....ಅದೋ ಕೇಳು !....ತಿನ್ನೋಕೆ ಇನ್ನೂ ಬೇಕೂಂತ ಹೊಡಕೊಳ್ಳುತ್ತಾ ಇದ್ದಾನೆ—ಈಗ—ಆ ಹೊಟ್ಟೆಬಾಕ !"—ಎಂದ.

ಅವನ ಮಾತು ನಿಜವಾಗಿತ್ತು. ಗ್ಯಾಸ್ಕೋಯಿನಿನ ಗುಡುಗು ಧ್ವನಿ ಮನೆಯನ್ನೆಲ್ಲಾ ತುಂಬಿ ಮೊಳಗುತ್ತಿತ್ತು. ಅವನು ವಿಧವೆಯ ಹೆಸರು ಹಿಡಿದು, " ಮೇರೀ !–ಮೇರೀ !! " ಎಂದು, ಮೇಲಿಂದ ಮೇಲೆ ಉಚ್ಚಕಂಠದಿಂದ ಕೂಗುತ್ತಿದ್ದ. ಅದನ್ನು ಕೇಳಿ ಅಕೆ ಅವಸರ ದಿಂದ ಮನೆಯೊಳಕ್ಕೆ ಹೋದಳು. ಹೆನ್ರಿ ಅವಳನ್ನು ಹಿಂಬಾಲಿಸಿದ. ಅವನಿಗೆ ಕ್ಯಾಪ್ಟನಿನ ಕೂಗಾಟ—ಸಲಿಗೆ ಇವು ತೀರ ಅಸಹನೀಯ ವಾಗಿದ್ದವು. ಅವನು ಮುಖ ಗಂಟಿಕ್ಕಿಕೊಂಡೇ—ಅವರು ಊಟಕ್ಕೆ ಕುಳಿತಿದ್ದ ಕೊಠಡಿಯನ್ನು ಪ್ರವೇಶಿಸಿದ. ಮೇರೀ ಸ್ಟ್ಯುಯರ್ಟಳನ್ನು ನೋಡುತ್ತಿದ್ದ ಹಾಗೆಯೇ ಗ್ಯಾಸ್ಕೋಯಿನ್, ದೊಡ್ಡದಾಗಿ ಕಣ್ಣು ಬಿಡುತ್ತ, ಮಹದಾನಂದದಿಂದ,

"ಆಹಾ ! ಮೇರೀ ! ನಿನ್ನ ಬೇಕನು ಬಲು ರುಚಿಯಾಗಿದೆ !— ಪ್‌-ಚ್‌ಟ ! ಬಲು ರುಚಿ-ನಿಜವಾಗಲು !....ಇಂಥಾದನ್ನ ತಿಂದು ಆರು ತಿಂಗಳ ಮೇಲಾಗಿತ್ತು-ನೋಡು! ಆಹಾ! ನೀನು ಎಷ್ಟು ಒಳ್ಳೆಯವಳು ಮೇರಿ!-ಎಲ್ಲಿ—ಇನ್ನೊಂದು ಹಲ್ಲೇ ಬೇಕನು ತಗೊಂಬಾ ಬೇಗ— ನೋಡೋಣ? ಈ ಬೆಟ್ಟದ ಗಾಳಿ ಹೊಟ್ಟೇನ ಮಸೆಯುತ್ತೆ! ಅದರಲ್ಲೂ —ಮೂರು ಹೊತ್ತೂ ಹಡಗಿನಲ್ಲೇ ಇರುತ್ತಾ, ಸಮುದ್ರದಮೇಲೆ ಅಲೆಯೋರ ಹೊಟ್ಟೇನ, ಮಸೆದೂ ಮಸೆದೂ ಚುರುಕುಮಾಡುತ್ತೆ !— ಅಲ್ಲವೇ ಬಂಪಸ್,—ಏನು ಹೇಳುತ್ತಿ ?"—

—ಎಂದು ಕೇಳಿದ. ಆದರೆ ಪೀಪಾಯಿಗಾತ್ರದ ಜಾನ್ ಬಂಪಸ್ ಆ ಕ್ಷಣದಲ್ಲಿ ಏನೂ ಹೇಳೋ ಹಾಗೇ ಇರಲಿಲ್ಲ. ಅವನು ಬೇಕನನ್ನು ಗಿಟಕಿ ಗಿಟಕಿ, ಬಾಯಿತುಂಬ ತುರುಕಿಕೊಂಡಿದ್ದ.

ಆದ್ದರಿಂದ, ಒಂದು ಅಕ್ಷರ ಕೂಡ ನುಸುಳಿ, ಅವನ ಹೊಟ್ಟೆಯು ಹೆಬ್ಬಾಗಿಲು ದಾಟಿ, ಈಚೆಗೆ ಬರೋಕೆ ಅವಕಾಶವೇ ಇರಲಿಲ್ಲ! ಆದರೂ ಸ್ವಲ್ಪ ಧಾರಾಳವಾದ ಸುಮ್ಮಾನದಿಂದ, ಏನೇನೋ ಸನ್ನೆ ಗಳನ್ನು ಮಾಡುತ್ತ, ಅವುಗಳಿಂದಲೇ ತನ್ನ ಮೆಚ್ಚಿಕೆಯನ್ನು ಪ್ರಕಟಿಸಲು ಬಹಳ ಸಾಹಸಮಾಡಿದ. ಸ್ವಲ್ಪ ಮಾತನಾಡುವುದಕ್ಕೂ ಪ್ರಯತ್ನಪಟ್ಟ. ಆದರೆ, ಹೀಗೆ ಮಾಡೋಕೆ ಹೋಗಿ, ಅವನಿಗೆ ಉಸಿರು ಕಟ್ಟಿದ ಹಾಗಾಯಿತು. ಮುಂದೆ ಐದು ನಿಮಿಷ, ಅವನ ಇಡೀ ಶರೀರ, ಉಗ್ರವಾದ ಸೆಳವುಗಳಿಗೆ ತುತ್ತಾಗಿ, ಪ್ರಾಣಿ ಬಲು ಒದ್ದಾಡಿದ. ಅವನ ಅವಸ್ಥೆ ನೋಡಿ ಕ್ಯಾಪ್ಟನಿಗೆ ಬಹಳ ನಗುಬಂತು. ಅವನು,

"ಆಹಾ! ಇಂಥಾ ಸುಂದರ ನೀಲೀ ಮುಖಾನ ನನ್ನ ಇಡೀ ಜೀವಮಾನದಲ್ಲಿ ನೋಡಿರಲಿಲ್ಲ!—ಇಲ್ಲ!! ಹ ಹ್ಹ ಹ್ಹಾ!—ಹೊ ಹ್ಹೊ ಹ್ಹೊ ಹ್ಹೋ!"

—ಎಂದು, ಗಟ್ಟಿಯಾಗಿ, ಹೊಟ್ಟೆ ಹಿಡಿದುಕೊಂಡು ನಕ್ಕ. ಜಾನ್ ಬಂಪಸ್, ಬಲು ಕಷ್ಟದಿಂದ, ಬಾಯಲ್ಲಿದ್ದುದನ್ನು ನುಂಗಿ, ಗಂಟಲು ಸರಿಮಾಡಿಕೊಳ್ಳುತ್ತ—ಕಣ್ಣಲ್ಲಿ ಬಂದ ನೀರನು ಒರೆಸಿಕೊಳ್ಳುತ್ತಿದ್ದ. ಆಗ, ಇವರು ಕುಳಿತ್ತಿದ್ದ ಕೊಠಡಿಯ ಬಾಗಿಲು ತೆರೆಯಿತು. ಅದರ ಮೂಲಕ ಪ್ರವೇಶಿಸಿದ—ಬ್ರಿಟಿಷ್ ಸಾರ್ವಭೌಮರ ನೌಕಾ ಪಡೆಗೆ ಸೇರಿದ "ಟಾಲಿಸ್ಮನ್" ಎಂಬ ಸಮರನೌಕೆಯ ಮಹಾ ನಾಯಕ.

ಎಡ್ಮಂಡ್ ಮಾಂಟೆಗೋ ತರುಣ ಮನುಷ್ಯನಾಗಿದ್ದ. ನೌಕಾ ಪಡೆಯಲ್ಲಿ ಅಷ್ಟುಭಾರಿ ಹುದ್ದೆಯಲ್ಲಿರುವ ವಯಸ್ಸು ಇನ್ನೂ ಬಂದಿರಲಿಲ್ಲ. ಆದರೆ, ಒಳ್ಳೇ ವಿದ್ಯಾವಂತನಾದ ಇವನು, ಧೈರ್ಯ, ಸಾಹಸ,—ಸರಳ ಸ್ವಭಾವ—ಹಿತವಾದ ನಡತೆ-ಅವಶ್ಯಬಿದ್ದರೆ ನಿರ್ಲಕ್ಷ್ಯದಿಂದ ನುಗ್ಗುವ ಗುಂಡಿಗೆ—ಆದರೂ ಸಂಯಮ, ಮತ್ತು ಕಷ್ಟಪಟ್ಟು ಪಡೆದ ಅನುಭವ-ಇವುಗಳಿಂದ, ಪಕ್ಕಾ ಆಂಗ್ಲೇಯನಾಗಿದ್ದ.

"ನಮಸ್ಕಾರ ನಿಮಗೆ—ಮಿಸೆಸ್ ಸ್ಟೂಯರ್ಟ್. ಇದ್ದಕ್ಕಿದ್ದ ಹಾಗೇ ನುಗ್ಗಿಬಂದದ್ದಕ್ಕೆ ದಯವಿಟ್ಟು ಕ್ಷಮಿಸಿ. ಸ್ವಲ್ಪ ತುರುತಾದ ಕಾರ್ಯ ಇರೋದೇ ಕಾರಣ. ಆ ನೀಚ ಸಮುದ್ರಗಳ್ಳ ನನಗೆ ಬಹಳ

ತೊಂದರೆ ಕೊಟ್ಟಿದ್ದಾನೆ. ಅವನ ವಿಚಾರ ನಿಮ್ಮ ಮಗನ ಹತ್ತಿರ ಇನ್ನೂ ಸ್ವಲ್ಪ ಮಾತಾಡೋದಿದೆ. ಅವನು ದಯವಿಟ್ಟು ನನ್ನ ಕೂಡ ಸ್ವಲ್ಪಬಂದರೆ—ನಾನು ಬಹಳ ಕೃತಜ್ಞನಾಗಿರುತ್ತೇನೆ."

—ಎಂದ, ಎಡ್ಮಂಡ್ ಮಾಂಟಿಗೋ. ಹೆನ್ರಿ ಕೂಡಲೆ ಎದ್ದು, ತಲೆ ಮೇಲೆ ತೋಪಿ ಇಟ್ಟುಕೊಳ್ಳುತ್ತ,

"ಓಹೋ—ಅದಕ್ಕೇನು !—ಧಾರಾಳವಾಗಿ"—ಎಂದ.

ಅವರಿಬ್ಬರೂ ಇನ್ನೇನು ಹೊರಗೆ ಹೊರಡಬೇಕು—ಆಗ ಗ್ಯಾಸ್ಕೋಯಿನ್ ಮಾತಾಡಿದ :

"ನನಗೆ ಆ ವಿಚಾರ ಸ್ವಲ್ಪ ಗೊತ್ತಿದೆ. ಬಹುಶಃ, **ಟೂಲಿಸ್ಕನ್** ಕಮಾಂಡರು, ಒಬ್ಬ ಅಪರಿಚಿತ ಮನುಷ್ಯನಿಂದ ವಿಷಯ ತಿಳಿದು ಕೊಳ್ಳೋ ಅಷ್ಟು ದೊಡ್ಡ ಮನಸ್ಸುಮಾಡಿದರೆ, ಅವರಿಗೆ ಅನುಕೂಲ ವಾದ ಮಾತು ಒಂದೆರಡು ಗೊತ್ತಾಗಬಹುದು—ಆ ಸಮುದ್ರಗಳ್ಳ—ಡರ್‌ವರ್ಡ್‌ನ ಸಂಬಂಧವಾಗಿ; ಅಂದರೆ, ನಾನು ಊಹಿಸೋ ಹಾಗೆ, ಅವನೇ ನೀವು ಹುಡುಕುತ್ತಿರೋ ಮನುಷ್ಯನಾಗಿದ್ದರೆ."

ಮಾಂಟಿಗೋ ಕ್ಯಾಪ್ಟನನ್ನು ಗಮನವಿಟ್ಟು ನೋಡುತ್ತ, "ಓಹೋ, ಅವನ ಸಮಾಚಾರ ಸಿಕ್ಕೋದಾದರೆ ಯಾರ ಮಾತು ಬೇಕಾದರೂ ಕೇಳೋಕೆ ಸಿದ್ಧವಾಗಿದ್ದೇನೆ !.... ನೀವು ಈ ದ್ವೀಪದಲ್ಲೇ ವಾಸಮಾಡುತ್ತಿದ್ದೀರೋ—ಹೇಗೆ !"—ಎಂದು ಕೇಳಿದ.

"ಇಲ್ಲ—ನಾನು ಇಲ್ಲಿ ವಾಸ ಮಾಡುತ್ತಿಲ್ಲ ; ನನ್ನ ಮನೆ ಸಮುದ್ರದ ಮೇಲಿದೆ ; ಹುಡುಗನಾಗಿದ್ದಾಗಿನಿಂದಲೂ ಅಲ್ಲೇ ನನ್ನ ವಾಸ"

"ಹ್ಞಾ! ಹಾಗಾದರೆ, ನಿಮಗೆ ಬಳಕೆಯಾಗಿರೊ ಈ ಸಮುದ್ರಗಳಲ್ಲಿ, ಆ ಕಳ್ಳನ್ನ ನೀವು ಅನೇಕ ಸಲ ಕಂಡಿರಬೇಕು—ಅಲ್ಲವೆ? ಅವನ ನೆನಪು, ನಿಮ್ಮ ಮನಸ್ಸಿಗೂ ಏನೋ ಕಿರಿಕಿರಿ ಮಾಡುತ್ತಿರೋ ಹಾಗಿದೆ.... ನಿಮಗೂ ಬಹಳ ಕಾಟ ಕೊಟ್ಟಿದ್ದಾನೊ?"

ಗ್ಯಾಸ್ಕೋಯಿನ್, ಕಿಡಿಕಾರುವ ನೋಟದಿಂದ—ಹುಬ್ಬು ಗಂಟಿಕ್ಕಿ ಉತ್ತರ ಕೊಟ್ಟ—"ಬಹಳ ಕಾಟವೇ !—ಅಷ್ಟಿಷ್ಟಲ್ಲ—

ಅವನ ಕಾಟ! ಈ ಸಮುದ್ರಗಳಲ್ಲೆಲ್ಲ, ಅವನು ನನಗೆ ಕೊಟ್ಟರೋ ಅಷ್ಟು ಕಿರುಕುಳ ಇನ್ನಾರಿಗೂ ಕೊಟ್ಟಿಲ್ಲ! ಯಾರಾದರೂ ಅವನಿಲ್ಲದ ಹಾಗೆ ಮಾಡಿಬಿಟ್ಟರೆ, ಲೋಕಕ್ಕೇ ಬಹಳ ಉಪಕಾರ ಮಾಡಿದಂತಾಗುತ್ತೆ! ಆದರೆ—"(ಈಗ ಅವನ ಸುಂದರವಾದ ಮುಖದ ಮೇಲೆ ಗಂಭೀರವಾದ ಮುಗುಳು ನಗೆ ಹರಡಿತು)—"ಆದರೆ, ವೇಗದಲ್ಲಿ ಅವನ ಸ್ಕೂನರಿಗೆ ಸಮನಾದ ಹಡಗುಗಳೇ ಇಲ್ಲಾಂತ ವದಂತಿ ಇದೆ. ನನಗೆ ತಿಳಿದ ಮಟ್ಟಿಗೆ, ಅವನು ಮಹಾ ಧೈರ್ಯಶಾಲಿ; ಹೊಡೆದಾಟ—ಕದನ ಎಂದರೆ ಬಲು ಪ್ರೀತಿ; ಹಿಂದು ಮುಂದು ನೋಡದೆ ಹೋರಾಟಕ್ಕೆ ನುಗ್ಗೋ ಅಂಥ ಕೊಲೆಪಾತಕರ ಸಹಾಯ ಬೇಕಾದಷ್ಟಿದೆ—ಅವನಿಗೆ. ಎಂಥಾ ಭಾರಿ ಯುದ್ಧದ ಹಡಗೇ ಆಗಲಿ, ಅದನ್ನ ಬೆನ್ನಟ್ಟೋನೇ ಹೊರತು, ಎಂದಿಗೂ ಅದಕ್ಕೆ ಬೆನ್ನು ತೋರಿಸಿ ಓಡೋನಲ್ಲ. ಕ್ಯಾಪ್ಟನ್ ಮಾಂಟಿಗೋ, ತಕ್ಕ ಆಯುಧಗಳಿಂದ ಕೂಡಿದ ಜನ ಸಾಕಾದಷ್ಟು ನಿಮ್ಮಲ್ಲಿ ಇದ್ದಾರಷ್ಟೆ? ಏಕೆಂದರೆ, ಈ ಡರ್‌ವರ್ಡ್, ಯಾತಕ್ಕೂ ಹೇಸದ ಘಾತುಕ—ಅಂತ ಚೆನ್ನಾಗಿ ತಿಳಿದುಕೊಳ್ಳಿ."

ತರುಣ ಕಮಾಂಡರು ಕೆಂಪೇರಿದ ಮುಖದಿಂದ ಉತ್ತರಕೊಟ್ಟ :

"ಸ್ವಾಮಿ, ನನ್ನ ವಿಷಯದಲ್ಲಿ ನೀವು ಕಳವಳ ಪಡುವುದು ತೀರ ಅನಾವಶ್ಯಕ. ನನ್ನ ಬಳಿ, ಕೇವಲ ಒಂದು ದೋಣಿ ಇದ್ದರೂ ಈ ಕಳ್ಳನ ಮೇಲೆ ಬೀಳುವುದು ನನ್ನ ಕರ್ತವ್ಯ. ಆಜಾನುಬಾಹುವಾಗಿ ಕಾಣುತ್ತಿರುವ ನಿಮ್ಮಂಥವರಲ್ಲಿ ಗಂಡುತನಕ್ಕೆ ಸಲ್ಲದ ಪುಕ್ಕಲುತನ—ಅನಿರೀಕ್ಷಿತ! ಆಶ್ಚರ್ಯಕರ!! ಬಹುಶಃ, ನಿಮಗೆ ಸಮಾಧಾನವಾಗೋ ಹಾಗಿದ್ದರೆ ಕೇಳಿ—ನನ್ನಲ್ಲಿ ಸಾಕಾದಷ್ಟು ಜನ ಇದ್ದಾರೆ; ಬೇಕಾದಷ್ಟು ಆಯುಧಗಳಿವೆ. ಇದಕ್ಕಿಂತಲೂ ಅನಾನುಕೂಲ ಸ್ಥಿತಿಗಳಲ್ಲಿ, ದೂರದ ಸಮುದ್ರಗಳ ಮೇಲೆ, ತನ್ನ ಬಾವುಟವನ್ನು ರಕ್ಷಿಸಿಕೊಳ್ಳೋದು, ಒಂದು ಬ್ರಿಟಿಷ್ ಯುದ್ಧನೌಕೆಗೆ ಹೊಸದೇನಲ್ಲ........ಆದರೆ, ಉಪ್ಪು ನೀರಿನ ಮೇಲೆ ಇಷ್ಟು ವರ್ಷ ಪಳಗಿದವರಿಗೆ, ಕಾವಲುನೌಕೆಗೂ—ಯುದ್ಧ ನೌಕೆಗೂ ಇರೋ ವ್ಯತ್ಯಾಸ ತಿಳಿದಿರುತ್ತೆ—ಎಂದು ಭಾವಿಸಿದ್ದೆ."

" ಅಯ್ಯಾ ತರುಣ, ಅಷ್ಟು ದುಡುಕಿನ ಮಾತು ಬೇಡ; ಈಗ ನೀನು ನಿನ್ನ ಸ್ವಂತ ಹಡಗಿನ ಮೇಲೆ ಇಲ್ಲ. ಅಪರಿಚಿತರ ಮಧ್ಯೆ ವಿನಯವಿರಬೇಕು. ನಾನೊಬ್ಬ ಸಾಧಾರಣ ಸಮುದ್ರ ವ್ಯಾಪಾರಿ. ನಾನು ಸುತ್ತೋ ಈ ಸಮುದ್ರಗಳಲ್ಲಿ, ಯುದ್ಧ ನೌಕೆಗಳು ಅಷ್ಟಾಗಿ ತನ್ನ ಬಾವುಟ ಏರಿಸಿ ಸುತ್ತಾಡುವುದಿಲ್ಲ. ಆದ್ದರಿಂದ ನನಗೆ ಬ್ರಿಟಿಷ್ ಯುದ್ಧ ನೌಕೆಗಳ—ಬೇರೆ ಬೇರೆ ಜಾತಿ—ಆಕಾರ—ಗಾತ್ರ ಮುಂತಾದುವುಗಳ ಪರಿಚಯ ಸ್ವಲ್ಪವೂ ಇಲ್ಲದೆ ಇರಬಹುದು. ಆದರೆ ನಿಮ್ಮ ಎಚ್ಚರಿಕೆಯಲ್ಲಿ ನೀವು ಇರಿ—ಎಂದು, ಸೂಚನೆ ಕೊಟ್ಟದ್ದರಿಂದ ಪ್ರಮಾದವಾಗಿರಲಾರದು. ನಿಮಗೆ ಕೋಪವನ್ನುಂಟುಮಾಡುವ ಉದ್ದೇಶ ಸ್ವಲ್ಪವೂ ಇರಲಿಲ್ಲ"—ಎಂದು ಬಹಳ ಗಂಭೀರವಾಣಿಯಿಂದ ಉತ್ತರ ಕೊಟ್ಟ—ಗ್ಯಾಸ್ಕೋಯಿನ್.

" ಒಳ್ಳೇದು—ಬಹಳ ಒಳ್ಳೇದು! ನಿಮ್ಮ ಎಚ್ಚರಿಕೆ ಮಾತುಗಳಿಗೆ ತುಂಬ ವಂದನೆಗಳು. ಸರಿ, ಬಂದ ವಿಷಯ ಮಾತಾಡೋಣ. ಈ ಕಳ್ಳ—ಡರ್‌ವರ್ಡ್ ಅಂತ ಹೆಸರಿಟ್ಟುಕೊಂಡಿದ್ದಾನಲ್ಲ-ದಗಾಕೋರ—ಇವನ ವಿಚಾರ ನಿಮಗೆ ಏನೇನು ಗೊತ್ತಿದೆ-ಹೇಳುತ್ತೀರಾ? ತನ್ನ ನಿಜವಾದ ಹೆಸರನ್ನೇ ಮರೆತು ಬಿಡೋ ಅಷ್ಟು, ಬೇರೆ ಬೇರೆ ಸುಳ್ಳು ಹೆಸರುಗಳಿಂದ ಸುತ್ತಾಡುತ್ತಾ ಇದಾನೆ-ಅನ್ನೋದರಲ್ಲಿ ಅನುಮಾನವೇ ನಿಲ್ಲ"—

—ಎಂದು, ಇನ್ನೂ ಸ್ವಲ್ಪ ವ್ಯಂಗಛಾಯೆಯಲ್ಲೇ ಉತ್ತರ ಕೊಟ್ಟು ಮಾತನಾಡಿದ—ಕ್ಯಾಪ್ಟನ್ ಮಾಂಟಗೋ. ಗ್ಯಾಸ್ಕೋಯಿನ್,

" ನಾನು ಬಲ್ಲಹಾಗೆ ಅವನು ಮಹಾ ಕೇಡಿಗ"—ಎಂದ.

" ಅಷ್ಟು ವಿಷಯ ನಿಮ್ಮಷ್ಟೇ ನಾನೂ ಬಲ್ಲೆ"

" ಆದರೂ, ಒಂದೊಂದು ಸಲ ಅವನು ಬಹಳ ಪಶ್ಚಾತ್ತಾಪ ಪಡುತ್ತಾನೆ—ಅಂತ ಕೇಳಿದ್ದೇನೆ; ಮತ್ತು ಸಾಧ್ಯವಾದರೆ- ತನ್ನ ಈಗಿನ ಕಸಬನ್ನ ಬಿಟ್ಟು, ಒಳ್ಳೆ ಮಾರ್ಗಕ್ಕೆ ಬದಲಾಯಿಸೋ ಆತುರದಲ್ಲೂ ಇರೋಹಾಗೆ ಸುದ್ದಿ ಇದೆ."

"ಅದೂ ಸಾಧ್ಯಾ—ಅಂತ ಊಹಿಸ ಬಲ್ಲೆ. ಅನೇಕ ಕೆಟ್ಟ ಮನುಷ್ಯರಿಗೆ—ಪಶ್ಚಾತ್ತಾಪದ ಕಾಲಗಳು ಆಗಾಗ ಬಂದು ಹೋಗೋದುಂಟು. ಅವನ ವಿಚಾರವಾಗಿ ಇದಕ್ಕಿಂತ ಸ್ವಲ್ಪ ಸ್ಪಷ್ಟವಾಗಿರೋದು ಏನನ್ನೂ ಹೇಳಲಾರಿರಾ—ಮಿತ್ರಾ?"

"ಹೇಳಬಲ್ಲೆ. ಕೇಳಿ, ಅವನು ನನ್ನ ಜೀವನಕ್ಕೇ ದೊಡ್ಡ ಕಂಟಕಪ್ರಾಯನಾಗಿದ್ದಾನೆ. ಯಾವಾಗಲೂ ಅವಂದೇ ಚಿಂತೆ ನನಗೆ! ಸದಾ ನನ್ನ ನೆರಳಿನ ಹಾಗೆ ಬೆನ್ನು ಹತ್ತಿ ಬರುತ್ತಾನೆ! ಇಷ್ಟೇ ಅಲ್ಲ; ಎಲ್ಲಾದರೂ ಸಿಕ್ಕಿಬಿದ್ದಾಗ, ತನ್ನ ಸ್ಕೂನರನ್ನ ನನ್ನ ಸ್ಕೂನರು—ಅಂತ ಹೇಳಿ ತಪ್ಪಿಸಿಕೊಂಡು—ನನ್ನ ತಲೆಗೇ ತಂದಿಟ್ಟುಬಿಡುತ್ತಾನೆ."

ಈ ಮಾತುಗಳನ್ನು ಕೇಳಿ, ತರುಣನಾದ ಅಧಿಕಾರಿಗೆ ಆಶ್ಚರ್ಯವಾಯಿತು. ಅವನು,

"ಆಹಾ! ಹಾಗಾದರೆ ನಿಜವಾಗಲೂ ಇಲ್ಲೇನೋ ಸ್ವಲ್ಪ ವಿಚಿತ್ರವಾದ ತೊಡಕಿದೆ! ಅಂದರೆ, ಎರಡು ಸ್ಕೂನರುಗಳಿಗೂ ಬಹಳ ಹೋಲಿಕೆ ಇರಬೇಕು; ಒಂದನ್ನು ಇನ್ನೊಂದು ಅಂತ ಮೋಸಗೊಳಿಸೋ ಹಾಗಿರಬೇಕು—ಅವುಗಳ ಸಾಮ್ಯ"—ಎಂದ.

"ನಿಜ-ನಿಜ; ಅವೆರಡೂ ಅವಳಿ ಜವಳಿಗಳು. ಒಟ್ಟಿಗೆ-ಒಂದೇ ಕಡೆ, ಒಂದೇ ಮಾದರೀಲಿ ಕಟ್ಟಲ್ಪಟ್ಟವು. ಗಂಧದ ಮರದ ವ್ಯಾಪಾರಕ್ಕಾಗಿ, ಈ ದ್ವೀಪಗಳಿಂದ — ಕಲ್ಕತ್ತ - ಮ್ಯಾನಿಲ್ಲಾ - ಆಸ್ಟ್ರೇಲಿಯ ಮುಂತಾದ ಸ್ಥಳಗಳಿಗೆ ಹೋಗಿ ಬರೋಕೆ ಮೀಸಲಾಗಿದ್ದವು. ಅವುಗಳ ಪೈಕಿ ಒಂದರ ಹೆಸರು **ಅವೆಂಜರ್**—ಅಂತ. ಅದರ ಮೊದಲ ಪ್ರಯಾಣದಲ್ಲೇ,ಆಗ ಅದರಲ್ಲಿ ಮೇಟ್ ಆಗಿದ್ದ ಈ ಡರ್‌ವರ್ಡ್,ದಂಗೆಯೆದ್ದು ಅದನ್ನ ವಶಪಡಿಸಿಕೊಂಡುಬಿಟ್ಟ. ಆಗಿನಿಂದ ಅವನು ಕಡಲುಗಳ್ಳನಾಗಿ—ಈ ದಕ್ಷಿಣ ಸಮುದ್ರಗಳಲ್ಲಿ ಸುತ್ತಾಡುತ್ತಾ ಇದ್ದಾನೆ. ಇನ್ನೊಂದರ ಹೆಸರು "**ಫ್ಲೋಮ್**" ಎಂದು. ಗಂಧದ ಮರದ ವ್ಯಾಪಾರಕ್ಕಾಗಿ ಅದರ ಕಮಾಂಡರಾಗಿರೋದು ನನ್ನ ದುರದೃಷ್ಟವಾಗಿದೆ."

"ಹ್ಞಾ!" ಎಂದು ಪುನಃ ಆಶ್ಚರ್ಯದಿಂದ, ಗಂಧದಮರದ

ವ್ಯಾಪಾರಿಯ ಕಡೆ ಪೂರ್ತಿ ತಿರುಗಿ, ಅವನನ್ನು ಹುಡುಕು ನೋಟದಿಂದ ದಿಟ್ಟಿಸಿನೋಡುತ್ತ,

"ನಾನು ನಿಮ್ಮನ್ನು ಇಲ್ಲಿ ಕಂಡದ್ದು ಬಹಳ ಒಳ್ಳೇ ಅದೃಷ್ಟ, ಮಿಸ್ಟರ್ ಗ್ಯಾಸ್ಕೋಯಿನ್. ನನ್ನನ್ನು ನಿಮ್ಮ ಸ್ಕೂನರಿಗೆ ಕರೆದೊಯ್ಯ ಬಲ್ಲಿರಾದರೆ, ಸಂತೋಷ. ನಾನು ಅದನ್ನ ನೋಡಿದ್ದರೆ—ಬಹಳ ಅನುಕೂಲ. ಎರಡಕ್ಕೂ ಅಷ್ಟು ಹೋಲಿಕೆಯಿದ್ದರೆ, ಫ್ಲೋರ್—ಇನ ಪರಿಚಯದಿಂದ **ಅವೆಂಜರ್**—ಅನ್ನು ಹುಡುವುದು ಎಷ್ಟೋ ಸುಲಭವಾಗುತ್ತೆ''—ಎಂದ, ಕ್ಯಾಪ್ಟನ್ ಮಾಂಟೆಗೋ.

"ನನ್ನ ಹಡಗನ್ನು ನೀವು ಧಾರಾಳವಾಗಿ ನೋಡಬಹುದು ಕಳ್ಳ ನಾವೆಗೂ ನನ್ನ ಸ್ಕೂನರಿಗೂ ಇರೋ ಒಂದು ವ್ಯತ್ಯಾಸ ಅಂದರೆ, ಕಳ್ಳ ನಾವೆಯ **ಮೂಕಿ ಗೊಂಬೆ,*** ಸಿಂಹದ ತಲೆ—ಅಚ್ಚಕೆಂಪು ಬಣ್ಣ ಬಳಿದಿದೆ; ನನ್ನ ಸ್ಕೂನರಿನದು ಬಿಳೀ ಬಣ್ಣ ಬಳಿದ ಹೆಣ್ಣುಗೊಂಬೆ. ಅಲ್ಲದೆ, ಕಳ್ಳ ಸ್ಕೂನರಿನ ಪಕ್ಕದ ಸುತ್ತ ಒಂದು ಕೆಂಪು ಪಟ್ಟಿ ಇದೆ. ಫ್ಲೋರ್ಇನ ಮೈ ಪಕ್ಕ ಪೂರ್ತಿ ಕಪ್ಪು."

"ದಯವಿಟ್ಟು, ನನ್ನ ಹಡಗಿಗೆ ಬಂದು, ಅಲ್ಲಿಂದ ನನ್ನದೊಂದು ದೋಣಿಲಿ—ನಿಮ್ಮ ಸ್ಕೂನರಿಗೆ ಕರೆದೊಯ್ಯುವಿರಾ?''

"ಅದು ಅಸಾಧ್ಯವಾದ ಕೆಲಸ. ನಾನು ಬಹಳ ತುರುತು ಕೆಲಸದ ಮೇಲೆ ಇಲ್ಲಿಗೆ ಬಂದಿದ್ದೇನೆ—ಸಾವಕಾಶಕ್ಕೆ ಆಸ್ಪದವೇ ಇಲ್ಲ. ಆದರೆ ಕೇಳಿ, ನನ್ನ ಸ್ಕೂನರು ದ್ವೀಪದ ಆಚೆ ಪಕ್ಕದ ಕೊಲ್ಲಿಯಲ್ಲಿ ಲಂಗರು ಬಿಟ್ಟು ನಿಂತಿದೆ. ನೀವು ಹಡಗಿನಲ್ಲಿ ಬಳಸಿ ಆ ಕಡೆ ಹೋದರೆ—ನನ್ನ ಮೇಟು ನಿಮನ್ನು ಬರಮಾಡಿಕೊಳ್ಳುತ್ತಾನೆ. ಅವನು ಬಹಳ ಆದರವುಳ್ಳವನು ಮತ್ತು ಬುದ್ಧಿವಂತ—ನೀವೇ ಕಾಣುತ್ತೀರಿ. ನಿಮ್ಮನ್ನು ಸ್ಕೂನರಿನ ಮೇಲೆಲ್ಲ ತೋರಿಸಿ—ನಿಮಗೆ ಬೇಕಾದ ಸಮಾಚಾರವನ್ನೆಲ್ಲ ಕೊಡುತ್ತಾನೆ.'' (ಎದ್ದು, ತಲೆ ಮೇಲೆ ತೋಪಿ ಇಟ್ಟುಕೊಳ್ಳುತ್ತ) "ಸರಿ, ಇನ್ನು ನಾನು ಹೊರಡಬೇಕು—ನಮಸ್ಕಾರ.''

* Figure Head ಹಡಗುಗಳ ಮುಂಭಾಗದಲ್ಲಿ ಅಲಂಕಾರಕ್ಕೆ ಇಡುವ ವಿಗ್ರಹ.

"ಸ್ವಲ್ಪ ತಾಳಿ! ಅಷ್ಟು ಜಾಣತದಿಂದ, ಬೇರೆಯವರ ಸೋಗಿನಲ್ಲಿ ಮೋಸ ಮಾಡಬಲ್ಲ ಈ ಪ್ರಚಂಡ ಕಳ್ಳನನ್ನ, ಕಳೆದ ಬಾರಿ ನೀವು, ಎಲ್ಲಿ ಅಥವಾ ಯಾವಾಗ, ಕಂಡಿರಿ—ಅಥವಾ ಕೇಳಿದಿರಿ, ಅನ್ನೋ ಮಾತನ್ನ ನೀವಿನ್ನೂ ಹೇಳೇ ಇಲ್ಲ"—

—ಎಂದು, ಸ್ವಲ್ಪ ಅರ್ಥವತ್ತಾದ ಮುಗುಳುನಗೆಯಿಂದ ಹೇಳಿದ, ಕ್ಯಾಪ್ಟನ್ ಮಾಂಟಿಗೋ ಗ್ಯಾಸ್ಕೋಯಿನ್,—

"ಹೆಚ್ಚು ಕಾಲವೇನೂ ಆಗಿಲ್ಲ; ಇವತ್ತು ಬೆಳಿಗ್ಗೆ ತಾನೆ ಅವನನ್ನ ನೋಡಿದೆ"—ಎಂದು ಗಂಭೀರವಾಗಿ ನುಡಿದ.

ಈ ಸಮಯಕ್ಕೆಸರಿಯಾಗಿ, ಮನೆಯ ಮುಂಬಾಗಿಲು ಬಲು ರಭಸದಿಂದ ತೆಗೆಯಲ್ಪಟ್ಟು, ಮುಂದಿನ ಹಜಾರದಲ್ಲಿ ಗಟ್ಟಿಯಾಗಿ ಕೂಗಾಡುತ್ತಿದ್ದ ಒಬ್ಬ ಹುಡುಗನ ಧ್ವನಿ ಕೇಳಿಬಂತು:

"ಹೋ! ಹಲೋ! ಹುರ್ರಾ!! ಸ್ಟೂಯರ್ಟಮ್ಮ!—ಹೆನ್ರೀ!! ಕೇಳಿ!—ಇದೀಗ ಭಾರಿ ಕೆಲಸ! ಒಳ್ಳೇ ತಿಮಾಷೆ!—ತಿಮಾಷೆ!! ಕಡೆಗೂ, ಆ ಕಡಲ್ಗಳ್ಳ ಬಂದು ಕಾಣಿಸಿಕೊಂಡು, ಅರ್ಧಕ್ಕರ್ಧ ಕಪ್ಪಿಗರನ್ನ ಕತ್ತರಿ - ಕತ್ತರಿಸಿ—"

ಇವರೆಲ್ಲ ಕುಳಿತಿದ್ದ ಕೊಠಡಿಯ ಬಾಗಿಲನ್ನು ತಳ್ಳಿ ತೆರೆದು ನೋಡಿದನೋ ಇಲ್ಲವೋ—ಇದ್ದಕ್ಕಿದ್ದ ಹಾಗೆಯೇ ಈ ಎಳೇ ಸುಂಟರಗಾಳಿಯ ಧ್ವನಿ—ನಟನೆ, ಎರಡೂ ನಿಂತು ಹೋದವು. ವಿಧವೆ—ಅಥವ ಅವಳ ಮಗನನ್ನ ಕಾಣಲು ಬಂದಿದ್ದ ಅವನು, ಅಷ್ಟು ಜನ ಹೊಸಬರನ್ನು ನೋಡಿ ಚಕಿತನಾದ. ಕಂದುವರ್ಣದ, ಗುಂಗುರು ಗುಂಗುರಾದ, ಕೆದರಿದ ತಲೆ ಕೂದಲಿನ ಈ ಹುಡುಗ, ಕೆಲವು ಕ್ಷಣ ಬಾಗಿಲಲ್ಲೇ ನಿಂತು, ಆಶ್ಚರ್ಯದಿಂದ ತನ್ನ ಕಪ್ಪಾದ ಕಣ್ಣುಗಳನ್ನು ಅರಳಿಸಿ, ಗುಂಪಿನಲ್ಲಿ ಒಬ್ಬೊಬ್ಬರನ್ನಾಗಿ ದಿಟ್ಟಿಸಿ ನೋಡುತ್ತ, ಕೊನೆಗೆ ಜಾನ್ ಬಂಪಸ್-ಅನ್ನು ನೋಡಿದ. ಅದುವರೆಗೂ ಆಶ್ಚರ್ಯದ ದುಂಡು "O" ಆಗಿದ್ದ ಅವನ ಬಾಯಿ, ಕೂಡಲೆ ಸಡಿಲಗೊಂಡು, ವಿಶಾಲವಾಗಿ ಕಿರಿಯಿತು, ಇದ್ದಕ್ಕಿದ್ದ ಹಾಗೆಯೇ ಗಟ್ಟಿಯಾಗಿ,

" ಅಬ್ಬಾ ! ಎಂಥಾ ಗ್ರ್ಯಾಂಪಸ್-ಉ* ! "
—ಎಂದು, ಈ ಶಹಬಾಸುಗಿರಿ ಮಾತುಗಳನ್ನಾಡಿ ಆ ಚಿಳ್ಳಿ ಹಿಮ್ಮೆಟ್ಟು ವುದರಲ್ಲಿದ್ದ; ಆಗ ಹೆನ್ರಿ ಸರ್ರನೆ ಅವನ ಕಡೆಗೆ ಎರಗಿ—ಕತ್ತಿಗೆ ಕೈಹಾಕಿ ಹಿಡಿದುಕೊಂಡು ಬಲವಾಗಿ ಒತ್ತುತ್ತ,

" ನೀನು ಎಲ್ಲಿ ಕೇಳಿದೆ ಈ ಸುದ್ದೀನ—ವಿಲ್‌ಕಾರೀ ? "

—ಎಂದು ಕೇಳಿದ.

" ಓ—ಓ ! ದಯವಿಟ್ಟು, ಸ್ವಲ್ಪ ಅದನ್ನೇ—ಅಂದ್ರೆ ದಯಾನ ತೋರಿಸು—ಹೆನ್ರಿ ; ಆಗ ಆದರ ಸಮಾಚಾರ ಎಲ್ಲಾ ಹೇಳಿ ಬಿಡ್ತೀನಿ. ಆದರೆ " (ಇಲ್ಲಿ ಮೆಲ್ಲಗೆ ಅಳು ನಟಿಸುತ್ತ) " ಆದರೆ ನನ್ನ ಆ—ಆ—ಗ್ರ್ಯಾಂಪಸಿಗೆ ಮಾತ್ರ ಕೊಡಬೇಡಾಂತ ಬೇಡಿಕೋತೀನಿ. ಕೇಳು, ನನಗೆ ಒಬ್ಬ ಈ ಸುದ್ದೀನ ಹೇಳಿದ. ಆ ಒಬ್ಬ ಸುದ್ದೀನ ಇನ್ನೊಬ್ಬನಿಂದ ಕೇಳಿದ ; ಆ ಇನ್ನೊಬ್ಬ, ಮತ್ಯಾರೋ ಒಬ್ಬನಿಗೆ—ಬೇರೆ ಇನ್ಯಾರೋ ಒಬ್ಬ ಹೇಳಿದಾಂತ—ಹೇಳಿದ ಸುದ್ದೀನ ಕೇಳಿದ. ಏನಂತಾ—ಅಂದರೆ—ಅವನು—ಹೇಳಿದ—ಅಂತ ಹೇಳಿದ ಸುದ್ದೀನ, ಕೇಳಿದೋನು—ದ್ವೀಪದ ಈ ತುದೀಗೂ ಆಚೆ ತುದೀಗೂ ನಡುವೆ ಎಲ್ಲೋ ಒಂದು ಜಾಗದಲ್ಲಿ—ಪೊದೆ ಮೆಳೆಗಳ ಸಂದೀಲಿ ಒಬ್ಬ ಕರೀ ಮನುಷ್ಯ ಓಡ್ತಾ ಇದ್ದನಂತೆ ; ಅವನ ಬಲಗಡೆ ತೋಳಿನಮೇಲೆ ಗೋಲಿ ತೂತುಬಿದ್ದು ರಕ್ತ ಸುರೀತಿತ್ತಂತೆ; ಅವನ ಹಿಂದೆ ಹತ್ತು ಜನ ಕಡಲ್ಗಳ್ಳರು ಭರಾಟೆಯಿಂದ ಬೆನ್ನಟ್ಟಿ ಓಡ್ತಾ ಇದ್ದರಂತೆ.... ಹಾ! ಹಾ ! ಹೋ !—ಅಯ್ಯೋ ! ಹೆನ್ರೀ ! ಹೆನ್ರೀ !!—ಸ್ವಲ್ಪ ದಯ ತೋರಿಸು ! ಇಲ್ಲದೆ ಇದ್ದರೆ ನನ್ನ ಆರೋಗ್ಯ ಕೆಟ್ಟೇಹೋಗುತ್ತೆ! ನಿನ್ನ—"

"ಮುಚ್ಚು ಬಾಯಿ ! ಹರಟೆಮಲ್ಲ ! ನೀನು ಏನು ನೋಡಿದೆ—ಅಥವ ಕೇಳಿದೆ—ಅನ್ನೋದನ್ನ ಸರಿಯಾಗಿ ಹೇಳಿದೆಯೋ ಸಮ ; ಇಲ್ಲದೆ ಇದ್ದರೆ—"

---

* Grampus ಒಂದು ಜಾತಿಯ ಊಸುಕೊಂಡಿರುವ ಸಮುದ್ರದ ಪ್ರಾಣಿ; ಬಂಪಸ್ ಹೆಸರಿನೊಡನೆ ಶಬ್ದಾನುಕರಣೆಯ ಹಾಸ್ಯ.

ಹುಡುಗಾಟವಾಡುತ್ತಿದ್ದ ಈ, ಸುಮಾರು ಹದಿಮೂರು ವರ್ಷದ ಚಿಳ್ಳೆ, ಅಸ್ವಾಭಾವಿಕವಾಗಿ ಇದ್ದಕ್ಕಿದ್ದ ಹಾಗೇ ಗಂಭೀರನಾಗಿ-ಹೆನ್ರಿಯ ಮುಖವನ್ನೇ ನೋಡುತ್ತ,

"'ಮುಚ್ಚು ಬಾಯಿ' ಅಂತೀಯ; 'ಸರಿಯಾಗಿ ಹೇಳು'—ಅಂತಾನೂ ಅಂತೀಯ! ಬಾಯಿ ಮುಚ್ಚಿಕೊಂಡು ಹೇಳೋದು ಹೇಗೆ? ಹೆನ್ರಿ, ನಿಜವಾಗಲೂ ನೀನು ಮುದುಕ ಆಗ್ತಾ ಆಗ್ತಾ, ಅನ್ಯಾಯ ಹೆಚ್ಚಾಗ್ತಾ ಇದೆ ನಿನ್ನಲ್ಲಿ!"—ಎಂದ.

"ನೋಡು ಕಾರೀ, ನೀನು ಹೇಳದೇ ಇದ್ದರೆ ನಿನ್ನ ಕತ್ತು ಹಿಸುಕಿ ಕೊಂದುಬಿಡ್ತೀನಿ!"

"ಹಾ! ನೀನು ಹಾಗೆಲ್ಲಾ ಮಾಡಲಾರೆ—ಹೆನ್ರೀ!"—

—ಎಂದು ಮನಕರಗೋ ಹಾಗೆ ಹೇಳಿದ ಕಾರಿ. ಇದನ್ನೆಲ್ಲಾ ಕೇಳುತ್ತಿದ್ದ ಜಾನ್ ಬಂಪಸ್,

"ಬಹುಶಃ ಆ ಚಿಳ್ಳೇಮರೀನ 'ಗ್ರಾಂಪಸ್' ಕೈಗೆ ಕೊಟ್ಟರೆ, ಅವನ ಬಾಯಿಂದ ಮಾತು ಹೊರಡೋ ಹಾಗೆ ಮಾಡ್ತಾನೆ"

—ಎಂದ. ಈ ಮಾತುಗಳನ್ನು ಕೇಳಿ ನಟನೆಯ ಭಯದಿಂದ ಗೋಳಾಡುತ್ತ, ಹೆನ್ರಿ, ಅವನನ್ನು ಬಂಪಸಿನ ಹತ್ತಿರ ಕರೆದೊಯ್ಯುವ ತನಕ ಸುಮ್ಮನಿದ್ದು, ಆ ನಾವಿಕ ದೈತ್ಯನ ಭಾರಿ ಮುಷ್ಟಿ ನೋಡಿದನೋ ಇಲ್ಲವೋ—ಹಠಾತ್ತನೆ ಜಗ್ಗಿ—ಹೆನ್ರಿಯ ಹಿಡಿತದಿಂದ ತಪ್ಪಿಸಿಕೊಂಡು ನುಸುಳಿ, ಬಾಗಿಲ ಕಡೆಗೆ ನುಗ್ಗಿ, ಹೊಸಲಲ್ಲಿ ನಿಂತು, ತಿರುಗಿ ನೋಡುತ್ತ, ತನ್ನ ಬಲಗೈಯಿನ ತೋರುಬೆರಳಿಂದ ತನ್ನ ಮೂಗಿನ ಪಕ್ಕದಲ್ಲಿ ಟಪ್ಪೆಂದು ಸದ್ದುಮಾಡಿ—ಒಂದು ಸಲ ಉಚ್ಚಸ್ವರದಲ್ಲಿ ಚೀರಿಟ್ಟು—ಸ್ಥಳದಿಂದ ಪರಾರಿಯಾದ, ಕಾರಿ.

ಹೆನ್ರಿ ಕೂಡಲೆ ಅವನನ್ನು ಹಿಂಬಾಲಿಸಿದ. ಹುಡುಗನೂ ಓಟದಲ್ಲಿ ಏನೂ ಕಡಿಮೆಯಾಗಿರಲಿಲ್ಲ. ಅವನನ್ನು ಹಿಡಿಯುವುದಕ್ಕೆ ಹೆನ್ರಿಯಂಥವನು ಕೂಡ ಅವರ ಮನೆ ಹಿಂದಿನ ಕಾಡಿನಲ್ಲಿ ನುಗ್ಗುತ್ತ—ಕಾಲು ಮೈಲಿ ಓಡಬೇಕಾಯಿತು. ಹಿಡಿದ ಕೂಡಲೆ ಹೆನ್ರಿ, ಅವನನ್ನು ಜಗ್ಗಿಸಿ ಅಲ್ಲಾಡಿಸುತ್ತ—

"ಲೋ, ಕಾರೀ! ಇದೆಂಥಾ ನಡವಳಿಕೆ ನಿನ್ನದು! ನಿನಗೆ ತಿಳಿದ ಸುದ್ದೀನ ಅಲ್ಲಿ--ನಮ್ಮ ಮನೇಲಿ, ಯಾಕೆ ಹೇಳದೆ ಓಡಿಬಂದೆ? ಅದು ನನಗೆ ಎಷ್ಟು ಬೇಕಾಗಿದೆಯೋ—ಅಲ್ಲಿ ನೀನು ನೋಡಿದೆಯಲ್ಲ—ಅವರಿಗೂ ಅಷ್ಟೇ ಬೇಕಾಗಿದೆ"—ಎಂದ ಹೆನ್ರಿ.

"ಓಹೋ! ಅವರಿಗೂ ಬೇಕೋ ಸುದ್ದಿ? ಬೇಕಾಗಿದ್ದೀತು! ಬಹುಶಃ ನಿನಗಿಂತ ಅವರಿಗೇ ಹೆಚ್ಚಾಗಿ ಬೇಕಾಗಿರಬಹುದು!"

"ಅದು ಹೇಗೆ?"

"ಹೌದು!—ಅಷ್ಟಲ್ಲದೆ! ಅವರೆಲ್ಲ ವೇಷ ಮರೆಸಿಕೊಂಡ ಕಡಲ್ಗಳ್ಳರಲ್ಲಾಂತ—ನನಗೇನು ಗೊತ್ತು?—ನಿನಗೇನು ಗೊತ್ತು?"

"ಇಲ್ಲ-ಇಲ್ಲ ಕಾರೀ. ಯಾಕೇ ಅಂತೀಯೇ, ಅವರಲ್ಲೊಬ್ಬ ನನ್ನ ತಾಯಿಗೆ ಚೆನ್ನಾಗಿ ಗೊತ್ತು. ಅವನೊಬ್ಬ ಹಳೇ ಸ್ನೇಹಿತ—ಅಂದರೆ ಪರಿಚಿತ—ಸ್ವಲ್ಪ ಹತ್ತಿರ ಅಂತಾನೇ ಹೇಳಬೇಕು. ಹಿಂದೆ ಎಷ್ಟೋ ಸಲ ನಮ್ಮ ಮನೆಗೆ ಬಂದು ಹೋಗಿದ್ದಾನೆ. ಅವನನ್ನ ಕಂಡರೆ—ಅಂದರೆ—ಅವನ ಕೆಲವು ನಡವಳಿಕೆಗಳನ್ನು ಕಂಡರೆ—ಅಷ್ಟು ಇಷ್ಟಾಂತ ಹೇಳಲಾರೆ ಅನ್ನು; ಆದರೆ ಮನುಷ್ಯ ವಿಶ್ವಾಸಕ್ಕೆ ಅರ್ಹ."

"ಆ ಮೂರು ಜನರಲ್ಲಿ ಯಾರ ವಿಚಾರ ನೀನು ಹೇಳ್ತಿರೋದು? ಆ ಗ್ರ್ಯಾಂಪಸ್ ವಿಚಾರ ಅಲ್ಲವಷ್ಟೆ?"

"ಅಲ್ಲ; ಆ ಇನ್ನೊಬ್ಬ—ದೊಡ್ಡ ಆಳು—ಲಕ್ಷಣವಾಗಿದ್ದಾನಲ್ಲ—ಅವನು."

"ಅವನನ್ನು ನೀನು ಬಹಳ ದಿನಗಳಿಂದ ಬಲ್ಲೇಂತ ನಿನಗೆ ಖಾತ್ರೀನೋ?"

—ಎಂದು, ಏನೋ ಸ್ವಲ್ಪ ತೊಡಕಿನ ನೋಟದಿಂದ ಕೇಳಿದ, ಕಾರಿ.

"ಓಹೋ—ಚೆನ್ನಾಗಿ; ಯಾಕೆ?"

"ಯಾಕೇ ಅಂತೀಯೋ ನಾನು ನಿನ್ನನ್ನು ಎಷ್ಟೋ ಸಲ ನೋಡಿದ್ದೇನೆ, ಮತ್ತು—ನಿನ್ನ ಬೆಕ್ಕು—ಹಂದಿಗಳು—ಕೋಳಿಗಳು—

ಇವುಗಳ ಮಾತು ಹಾಗಿರಲಿ—ನಿನ್ನ ತಾಯೀನೂ ಎಷ್ಟೋ ಸಲ ನೋಡಿದ್ದೀನೆ—ನಿಮ್ಮ ಮನೇಗೂ ಎಷ್ಟೋ ಸಲ ಬಂದೀರೋದು ನಿನಗೂ ಗೊತ್ತಿದೆ. ಆದರೂ ಇವತ್ತಿಗೆ ಮುಂಚೆ—ಅವನನ್ನು— ನಾನು ನೋಡೇ ಇರಲಿಲ್ಲವಲ್ಲ !—ಏನು ಹೇಳ್ತಿ ಅದಕ್ಕೆ ? "

" ಅದೇಕೆ ಅಂದರೆ—ಅವನು ಬರೋದು ಯಾವಾಗಲೂ ರಾತ್ರಿ ಹೊತ್ತು; ಬಂದರೂ ಎರಡುಮೂರು ಗಂಟೆಗಳಿಗೆ ಹೆಚ್ಚಾಗಿ—ಇರೋದು ಅಪರೂಪ."

" ಹುಂ! ಏನೋ ಸ್ವಲ್ಪ ತಮಾಷೆಯಾಗಿದೆ ಸ್ನೇಹದ ತರಹ ನೋಡಿದರೆ! ಇರಲಿ, ಆದರೆ -ಆ ಗ್ರಾಂಪಸ್ ಇದಾನಲ್ಲ—ಅವನು ಕಡಲ್ಗಳ್ಳ ಅಲ್ಲಾಂತ ನಿನಗೆ ಹೇಗೆ ಗೊತ್ತು ? "

" ಹೇಗೆ ಅಂದರೆ—ಅವನು ಗ್ಯಾಸ್ಕೋಯಿನ್ ಕಡೆ ಮನುಷ್ಯ"

" ಓ, ಅವನ ಹೆಸರು ಗ್ಯಾಸ್ಕೋಯಿನ್ ಅಂತಾನೋ ? ಸರಿ-ಸರಿ ! ಪಕ್ಕಾ ಕಡಲ್ಗಳ್ಳ ಹೆಸರೇ ಆಗಿದೆ! ಏನಾದರೂ ಆಗಿರಲಿ, ಅವನು ನಿನ್ನ ಸ್ನೇಹಿತ ಅಂತ ನೀನು ಹೇಳೋದರಿಂದ—ಪರವಾಗಿಲ್ಲ. ಆ ಇನ್ನೊಬ್ಬನ ಹೆಸರೇನು ? "

" ಬಂಪಸ್—ಜಾನ್ ಬಂಪಸ್—ಅಂತ "

ಈ ಹೆಸರು ಕೇಳಿದ ಕೂಡಲೆ—ಹುಡುಗ ತನ್ನ ಎರಡು ಕೈಗಳಿಂದಲೂ ಪಕ್ಕಗಳನ್ನು ತಟ್ಟಿಕೊಳ್ಳುತ್ತ, ಕಣ್ಣು ಬಾಯಿ ದೊಡ್ಡದಾಗಿ ತೆರೆದು, ಹಲ್ಲು ಕಿರಿದು, ಕೊನೆಗೆ—ತಡೆಯಲಾರದೆ ಘೊಳ್ಳೆಂದು ಗಟ್ಟಿಯಾಗಿ ನಗುತ್ತ, ನಕ್ಕು ನಕ್ಕು ಸಾಕಾಗಿ—ಆಯಾಸದಿಂದ ತನ್ನ ದೇಹವನ್ನು ತೂಗಾಡಿಸತೊಡಗಿದ. ಸ್ವಲ್ಪಹೊತ್ತು ಸುಧಾರಿಸಿಕೊಂಡ ಮೇಲೆ—ಕಾರಿ ಪುನಃ, ಗಂಭೀರವಾಗಿ ಕೇಳಿದ:

" ಇವರಿಬ್ಬರೂ ಸರಿ; ಆದರೆ ಆ ಇನ್ನೊಬ್ಬ ಕುಳ್ಳ ಆಸಾಮಿ ಇದ್ದನಲ್ಲ-ಮೈಮೇಲೆಲ್ಲಾ ಚಿನ್ನದ ಸರಿಗೆ ಇದ್ದವನು, ಅವನ ವಿಷಯ ಏನು ? ಅವನ ಮುಖನೋಡಿದರೆ-ಎಲ್ಲಾವುದಕ್ಕೂ ಸೈ ಅನ್ನೋ ಧೈರ್ಯ ಕಾಣ್ತಿತ್ತು. ಬಹುಶಃ ಅವನೇ ಇರಬಹುದು ಕಡಲ್ಗಳ್ಳ."

"ಅಯ್ಯೋ-ಮುಟ್ಠಾಳ! ಆವನು ಯಾರು ಗೊತ್ತೇ? ಬ್ರಿಟಿಷ್ ಸಾರ್ವಭೌಮರ ಕಾವಲು ಹಡಗು ಟಾಲಿಸ್ಮನ್-ಇನ ಕಮಾಂಡರು"

"ಬ್ರಿಟಿಷ್ ಸಾರ್ವಭೌಮರ ಹತ್ತಿರ ಅವನಂಥಾವರು ಇನ್ನೂ ಬಹಳ ಜನ, ಇದ್ದರಾದೀತು"

"ಓ—ಅಂಥಾವರು ಬೇಕಾದಷ್ಟು ಜನ ಇದ್ದಾರೆ—ಅವರ ಹತ್ತಿರ—ಆಯಿತು, ಈ ಕಡಲ್ಗಳ್ಳನ ಸಮಾಚಾರ ನೀನು ಏನೇನು ಕೇಳಿದ್ದೀಯೆ? ಮತ್ತು ಆ ಗಾಯವಾದ ಕಪ್ಪಿಗ ಅಂತ ಅಂದೆಯಲ್ಲ— ಅವನ ಸಮಾಚಾರ ಏನು? ಬೇಗ ಹೇಳು."

ಕಾರಿ, ಇದುವರೆಗೂ ಇದ್ದ ಹಗುರಭಾವವನ್ನು ಬಿಟ್ಟು ಗಂಭೀರ ದಿಂದ ಹೇಳತೊಡಗಿದ: "ನನಗೆ ಗೊತ್ತಿರೋದು ಇಷ್ಟು; ಇವತ್ತು ಬೆಳಿಗ್ಗೆ ಬೆಟ್ಟಕ್ಕೆ ಹೋಗಿದ್ದೆ. ಅದರ ನೆತ್ತಿ ದಾಟೋಣಾಂತ ಮನಸ್ಸಾ ಯಿತು; ಹತ್ತಿಹೋದೆ. ಅಲ್ಲಿಂದ ನಾನು ಮೊದಲು ನೋಡಿದ್ದು— ಕೊಲ್ಲೀಲಿ ತೀರದ ಗುಡ್ಡದ ಬುಡದಲ್ಲಿ—ಲಂಗರು ಬಿಟ್ಟಿದ್ದ ಒಂದು ಸ್ಕೂನರು. ಎಲ್ಲಿ-ಅಂತೀಯ, ಎಷ್ಟೋಸಲ ನಾನೂ ನೀನೂ ಹಂದಿ ಗಳನ್ನು ಅಟ್ಟಿಹೋಗುತ್ತಾ ಇರಲಿಲ್ಲವೇ-ಅಲ್ಲಿ. ಅದೆಂಥಾ ಹಡಗೋ ನೋಡೋಣ, ಸಾಧ್ಯವಾದರೆ, ಅದರಮೇಲೆ ಹತ್ತಿಹೋಗಿ ನೋಡೋ ಣಾಂತ-ಬೆಟ್ಟದಿಂದ ಆಚೆ ಪಕ್ಕಕ್ಕೆ ಇಳಿದು ಹೋದೆ. ನಾನಿನ್ನೂ ತೆಂಗಿನ ತೋಪಿನಲ್ಲಿ ಅರ್ಧದೂರ ಹೋಗಿರಲಿಲ್ಲ, ಆಗ ಒಬ್ಬ ಕಪ್ಪಿಗ ಭಯಂಕರ ವಾಗಿ ಚೀರಿದ್ದು ಕೇಳಿಸಿತು—'ಓಹೋ ನಮ್ಮ ಪಾಳೆಯದಮೇಲೆ ಬೀಳೋಕೆ ಮತ್ತೆ ಬರ್ತಾ ಇದ್ದಾರೆ—ಈ ಕಾಡುಜನ' ಅಂದುಕೊಂಡು, ನಾನು ಅವಿತುಕೊಳ್ಳೋಕೆ ಮುಂಚೇನೇ ಒಬ್ಬ ಬರೀ ಮೈಯಿನ **ಕಾಡಿಗ** ನನ್ನ ಕೈಗೇ ಬೀಳೋ ಹಾಗೆ ಓಡಿಬಂದ. ಹೆದರಿಕೆಯಿಂದ ಅವನ ಮುಖ ಎಲ್ಲ ಹಸುರಾಗಿಬಿಟ್ಟಿತ್ತು. ಅವನ ಬಲಗಡೆ ತೋಳಿ ನಿಂದ ರಕ್ತ ಸುರೀತ್ತಿತ್ತು.

"ನನ್ನ ಕಂಡ ಕೂಡಲೆ—ಈ ಜನಕ್ಕೆ ಇಷ್ಟವಾದಂತೆ—ಇವನು ತನ್ನ ಚಾಕು ಇಂದ ನನ್ನ ಸೀಳಿ—ಜೀವಸಹಿತ ತುಂಡುಹಾಕೋದು

ಬಿಟ್ಟು—ಬೆಚ್ಚಿಬಿದ್ದು—ಇನ್ನೊಂದು ಸಲ ಬಲವಾಗಿ ಚೀರಿ, ಬಂದ ದಾರೀಲೇ ವಾಪಸ್ ದೌಡಾಯಿಸಿದ—ಮೊಲದ ಹಾಗೆ. ಆದೇಕ್ಷಣವೇ ಇವನ ಕೂಗು ಕೇಳಿ—ಆರು ಜನ ನಾವಿಕರು—ಕೂಗುಹಾಕುತ—ಮೆಳೆ ಇಂದ ಈಚೆಗೆ ನೆಗೀತಾ ಬಂದರು. ಅವರು ಅವನ ಬೆನ್ನಟ್ಟಿ ಬಂದಿದ್ದರು ಅಂತ ನನಗೆ ಗೊತ್ತಾಯಿತು ಕೂಡಲೆ ನಾನು ಒಂದು ದಟ್ಟವಾದ ಪೊದೇಲಿ ನುಗ್ಗಿ ಅವಿತುಕೊಂಡೆ. ಆ ಕುರುಡು ಬಾವಲಿಗಳೆಲ್ಲ—ಬೊಬ್ಬೆಹಾಕುತ್ತ—ನನ್ನ ಮೂಗಿಗೆ ಒಂದು ಬೆಟ್ಟುದೂರದಲ್ಲೇ—ಹಾದುಹೋದರು. ನಿಜವಾಗಲೂ ಹೇಳ್ತೀನಿ—ಹೆನ್ರಿ, ನಾನು ಹುಟ್ಟಿದಾಗಿನಿಂದ, ಈ ಕೇಡಿಗರಂಥ ಕಡಲ್ಗಳ್ಳ ಮುಖಗಳನ್ನ ನೋಡಿರಲಿಲ್ಲ. ಆಗ, ಇಲ್ಲೆಲ್ಲ ಸುತ್ತಮುತ್ತ ಹಾವಳಿ ಮಾಡ್ತಿರೋ ಕಳ್ಳಾವೆ—ಆ ಕೊಲ್ಲೀಲಿ ಇರೋ ಸ್ಕೂನರೇ ಆಗಿರಬೇಕು-ಅಂತ ನನಗೆ ಖಂಡಿತ ಮನಸ್ಸಿಗೆ ಅನ್ನಿಸಿತು. ಕೂಡಲೆ, ನಾನು ನೋಡಿದ್ದನ್ನೆಲ್ಲ ನಿನಗೆ ಹೇಳೋಕೆ-ಎಷ್ಟು ಬೇಗ ಓಡಿ ಬಂದೆ ಅಂದ್ರೆ—ಅಷ್ಟು ಬೇಗ ಓಡಿಬಂದೆ. ನೋಡಪ್ಪ, ಇಷ್ಟೆ—ನನಗೆ ತಿಳಿದಿರೋದೆಲ್ಲ ನಿನಗೆ ಹೇಳಿದೀನಿ."

"ನೀನು ತಿಳಿಕೊಂಡಿರೋದೆಲ್ಲ ತಪ್ಪು—ಮಗೂ! ನೀನು ನೋಡಿದ್ದು ಕಳ್ಳಾವೆ ಅಲ್ಲ—ಅದು ಫ್ಲೋಮ್—ಅನ್ನೋ ಸ್ಕೂನರ್.... ಆದರೆ—ವಿಚಿತ್ರ! ಬಹಳ ವಿಚಿತ್ರ!"

"ಏನು—ವಿಚಿತ್ರ?"

"ನೀನು ಗಾಯವಾದ ಕಪ್ಪಿಗನನ್ನ ನೋಡಿದ್ದಲ್ಲ; ಅವನ ವಿಚಾರ ಎಲ್ಲ ನಾನು ಹೇಳಬಲ್ಲೆ—ಆದರೆ ಆ ನಾವಿಕರು—ಅದೇ ನನಗೆ ಅರ್ಥವಾಗದೇ ಇರೋದು."

ಹೀಗೆಂದು ಹೇಳಿ ಹೆನ್ರಿ, ಆ ಹುಡುಗನಿಗೆ—ಆ ದಿನ ಬೆಳಗ್ಗೆ ತನಗೆ ಉಂಟಾದ ಅನುಭವವನ್ನೆಲ್ಲ ವಿವರವಾಗಿ ಹೇಳಿದ. ಅನಂತರ ಮಾತು ಮುಂದರಿಸಿ,

"ಆದರೆ, ಕಾರೀ ನೀನು ನೋಡಿದೆ—ಅಂತ ಹೇಳಿದ ಕಡಲ್ಗಳ್ಳರು—ಅವರ ಹಡಗು ಕಣ್ಣಿಗೆ ಕಾಣಿಸದ ಹಾಗೆ—ಹೇಗೆ ಈ ತೀರದ

ಮೇಲೆ ಬಂದರೂ ಅನ್ನೋದೇ ನನಗೆ ಅರ್ಥವಾಗುತ್ತಾ ಇಲ್ಲ. ಬೆಟ್ಟದ ನೆತ್ತಿಯಿಂದ, ದ್ವೀಪದ ಒಂದು ಪಕ್ಕದಲ್ಲಿ **ಟೌಲಿಸ್ಮನ್** ಇನ್ನೊಂದು ಪಕ್ಕದಲ್ಲಿ **ಫ್ಲೋವ್** ಹೊರತು ಇನ್ನೇನೂ ಕಾಣಿಸುತ್ತಾ ಇಲ್ಲಾಂತ ನಾನು ಖಂಡಿತವಾಗಿ ಹೇಳಬಲ್ಲೆ. ತೀರದ ಬಂಡೆಗಳ ಮರೆಯಲ್ಲಿ ಚಿಕ್ಕ ದೋಣಿಗಳು ಅವಿತಿರಲು ಸಾಧ್ಯ—ಆದರೆ ಯಾರೇ ಆಗಲಿ—ಶತ್ರುಗಳಾದವರು, ತಮ್ಮ ಹಡಗನ್ನ ಕಣ್ಣಿಗೆ ಕಾಣೋಹಾಗೆ ನಿಲ್ಲಿಸಿಕೊಳ್ಳದೆ, ದೋಣೀಲಿ ತೀರಕ್ಕೆ ಬರೋ ಸಾಹಸ ಮಾಡೊಲ್ಲ. ಇನ್ನು ಫ್ಲೋವ್—ಇನ ಜನರ ವಿಚಾರ ಅಂದರೆ—ಅವರೆಲ್ಲ ಸಾಧಾರಣ ನಾವಿಕರು. ಅವರು ತೀರಕ್ಕೆ ಬರೋಕೆ ಅಪ್ಪಣೆ ಇದ್ದಹಾಗೆ ಕಾಣೆ; ಒಂದು ವೇಳೆ ಇದ್ದರೂ—ವಿನೋದಕ್ಕೆ, ಒಬ್ಬ ಗಾಯಗೊಂಡ ಕಾಡಿಗನ್ನ ಬೆನ್ನಟ್ಟಿ ಹೋಗೋ ಸಂಭವವಿಲ್ಲ. ಇದರಲ್ಲಿ ಏನೋ ರಹಸ್ಯ ಇದೆ ಕಾರೀ" (ಎಂದು, ಚಟುವಟಿಕೆಯಿಂದ) "ನಮ್ಮ ಪಾಳೆಯದ ಜನರಿಗೆ ಎಷ್ಟು ಬೇಗೆ ಎಚ್ಚರಿಕೆ ಕೊಟ್ಟರೆ ಅಷ್ಟು ಕ್ಷೇಮ. ಬಾ, ಕಾರೀ, ನಮ್ಮ ಮನೆಗೆ ಹೋಗೋಣ; ನೀನು ನನಗೆ ಹೇಳಿದ್ದನ್ನೆಲ್ಲ ಬ್ರಿಟಿಷ್ ಅಧಿಕಾರೀನೂ ಕೇಳಲಿ"—ಎಂದ.

ಮಿಸೆಸ್ ಸ್ಟೂಯರ್ಟಳ ಕುಟೀರದಲ್ಲಿ ಸೇರಿದ್ದ ಗುಂಪಿಗೆ, ಕಾರಿ, ಆ ದಿನ ಬೆಳಿಗ್ಗೆ ತಾನು ನೋಡಿದ ಘಟನೆಗಳನ್ನೆಲ್ಲಾ ವಿವರಿಸಿ ಮುಗಿಸಿದ ಮೇಲೆ, ಗ್ಯಾಸ್ಕೋಯಿನ್ ನಿಧಾನವಾಗಿ ಹೇಳಿದ:

"ಕ್ಯಾಪ್ಟನ್ ಮಾಂಟಿಗೋ, ಈ ಕಡಲ್ಗಳ್ಳನ ಹಡಗು ಈಗಲೂ ಸಹ, ನಿಮ್ಮ ಹಡಗಿನ ಫಿರಂಗಿ ಗುಂಡು ತಾಗುವ ದೂರದ ಒಳಗೇ ಇದೆ—ಅನ್ನೋದರಲ್ಲಿ ನನಗೆ ಸ್ವಲ್ಪವೂ ಸಂದೇಹವಿಲ್ಲ; ಆದ್ದರಿಂದ, ನೀವು ಕೂಡಲೆ ನಿಮ್ಮ ಹಡಗಿಗೆ ಹಿಂತಿರುಗಿ, ಅವನನ್ನು ಸೆರೆಹಿಡಿಯುವುದಕ್ಕೆ ಸಿದ್ಧತೆ ಮಾಡಿಕೊಳ್ಳಿ—ಎಂದು ನನ್ನ ಸಲಹೆ. ಈ ಹುಡುಗನ ಕಣ್ಣಿಗೆ ಬಿದ್ದ ಜನ ಕಡಲ್ಗಳ್ಳರ ಹಾಗೆ ಕಂಡದ್ದು ನನಗೇನೂ ಆಶ್ಚರ್ಯಕರವಲ್ಲ; ರಕ್ತ ಬಿಸಿಯೇರಿದಾಗ ಅನೇಕ ಜನ ಘೋರವಾಗಿ ಕಾಣುತ್ತಾರೆ. ನನ್ನ ಜನಗಳಲ್ಲೇ ಕೆಲವರು ಹಾಗೆ ಕಾಣೋರು ಇದ್ದಾರೆ.

ಆದರೆ, ಈ ದಿನ ಬೆಳಿಗ್ಗೆ, ಎಲ್ಲೋ ಕೆಲವು ಜನ ಮಾತ್ರ ತೀರದ ಮೇಲೆ ಹೋಗತಕ್ಕದ್ದೆಂದು ಕಟ್ಟಪ್ಪಣೆ ಮಾಡಿದ್ದೆ; ಮತ್ತು ಅವರು —ಕಾಡು ಜನರ ಪಾಳೆಯದ ಹತ್ತಿರ ಕಾಣಿಸಿಕೊಳ್ಳದ ಹಾಗೆ—ದೂರದಲ್ಲೇ ಇದ್ದು ಹೋಗಬೇಕೆಂದೂ ತಿಳಿಸಿದ್ದೆ. ಅವರೆಲ್ಲ ಇಷ್ಟುಹೊತ್ತಿಗೆ ವಾಪಸು ಹಡಗಿಗೆ ಹೋಗಿ ಸೇರಿಕೊಂಡಿರೋದರಲ್ಲಿ—ಅನುಮಾನವಿಲ್ಲ. ನೀವು ಬೆಟ್ಟಗಳಲ್ಲಿ ಬೇಟೆ ತರಹ ಏನಾದರೂ ನಡೆಸೋ ಯೋಚನೆ ಮಾಡಿದರೆ—ನಾನೂ ಕೆಲವು ಕೈಗಳನ್ನು ಕೊಡಬಲ್ಲೆ."

"ನೀವು ಆ ಮಾತು ಹೇಳುವುದಕ್ಕಾಗಿ ವಂದನೆಗಳು.'' (ಇಲ್ಲಿ ವ್ಯಂಗ್ಯ ಬೆರೆತ ಧ್ವನಿಯಲ್ಲಿ) "ಬಹುಶಃ, ನನಗೆ ನಿಮ್ಮ ಕೈಗಳಲ್ಲಿ ಕೆಲವು ಬೇಕಾಗಬಹುದು! ಸರಿ, ನನ್ನ ಹಡಗಿಗೆ ಬಂದು ಜೊತೆ ಕೊಡಲು ನೀವು ಇಷ್ಟಪಡದ ಕಾರಣ—ಇಲ್ಲೇ ನಿಮ್ಮಿಂದ ಬೀಳ್ಕೊಳುತ್ತೇನೆ.'' —ಎಂದು, ಕ್ಯಾಪ್ಟನ್ ಮಾಂಟೆಗೋ, ಸ್ವಲ್ಪ ಸೆಟೆದುಕೊಂಡೇ ಬಾಗಿ ವಂದಿಸಿ—ಕುಟೀರದಿಂದ ಹೊರಹಾಯ್ದು—ಬೇಗ ಹೋಗಿ ತನ್ನ ಹಡಗನ್ನು ಹತ್ತಿದ. ಕೂಡಲೆ ಸೀಳು ಧ್ವನಿಯಲ್ಲಿ ಹಡಗಿನ ಸೀಟಿ ಕೂಗಿತು ಸಿದ್ಧರಾಗಲು ಜನಗಳಿಗೆ ಅಪ್ಪಣೆ ಕೊಡುತ್ತಿದ್ದ ಅಧಿಕಾರಿಯ ಗೊಗ್ಗರು ಧ್ವನಿ -ತೀರದಲ್ಲಿದ್ದ ಮಂದಿಗೆ ಕೇಳಿಸಿತು.

ಈ ಘಟನೆಗಳು ನಡೆದ ತರುವಾಯದ ಒಂದು ಗಂಟೆ ಕಾಲ ಫ್ಲೋಮಿನ ಕ್ಯಾಪ್ಟನ್, ವಿಧವೆ ಸ್ಟೂಯರ್ಟ್ ಮತ್ತು ಅವಳ ಮಗ ಹೆನ್ರಿ, ಇಷ್ಟೇ ಜನ ಒಟ್ಟಿಗೆ ಕಲೆತು ಮಾತನಾಡುತ್ತಿದ್ದರು. ಎಳೇ ಪ್ರಾಯದ ಕಾರೀ, ಜಾನ್ ಬಂಪಸಿನೊಡನೆ—ಅಥವಾ ಆ ಕುಚೇಷ್ಟೆ ಹುಡುಗ ಕರೆಯಲು ಇಷ್ಟಪಟ್ಟಂತೆ—ಜೋ ಗ್ರಾಂಪಸಿನೊಡನೆ ಚಿರ ಸ್ನೇಹದ ತಳಹದಿ ಹಾಕುವುದರಲ್ಲಿ ನಿರತನಾಗಿದ್ದ.

---

೫

# ಸಮರ ಸನ್ನಾಹ

ವಿಧವೆಯ ಕುಟೀರದಲ್ಲಿ ಮಾತುಕತೆ ಮುಗಿದಮೇಲೆ, ಹೆನ್ರಿ ಸ್ಟ್ಯುಯರ್ಟ್ ಮತ್ತು ಗ್ಯಾಸ್ಕೋಯಿನ್ ಇಬ್ಬರೂ, ಮನೆಯಿಂದ ಹೊರಟು, ಕಾಡನ್ನು ಪ್ರವೇಶಿಸಿ, ದ್ವೀಪದ ಮಧ್ಯ ಭಾಗಕ್ಕೆ ಒಯ್ಯು ತ್ತಿದ್ದ—ಸಣ್ಣ ಕಾಲು ಹಾದಿಯಲ್ಲಿ ನಡೆಯುತ್ತ—ಅದು ಕವಲಾಗಿದ್ದ ಸ್ಥಳ ತಲುಪಿದರು. ಪಾಳೆಯದ ಹೊರ ಅಂಚನ್ನು ಬಳಸಿ, ಮಿ॥ ಮೇಸನ್-ಇನ ಮನೆಗೆ ಹೋಗುತ್ತಿದ್ದ ಕವಲನ್ನು, ಹೆನ್ರಿ ಹಿಡಿದು ಹೊರಟ. ಬೆಟ್ಟಗುಡ್ಡಗಳ ನಡುವಿಗೆ ಒಯ್ಯುತ್ತಿದ್ದ ಇನ್ನೊಂದು ಹಾದಿಯಲ್ಲಿ, ಗ್ಯಾಸ್ಕೋಯಿನ್ ಹೊರಟ.

ಹೆನ್ರಿ ಮೇಸನಿನ ಓದುವ ಕೊಠಡಿಯ ಬಾಗಿಲು ತಟ್ಟಿ ಒಳಗೆ ಪ್ರವೇಶಿಸುತ್ತಲೆ, ಅವನು,

“ಹ್ಹಾ! ಹೆನ್ರಿ—ಕೂತುಕೋ. ಏನು ಸಮಾಚಾರ? ಮನೆ ಕಡೆ ಏನೂ ತೊಂದರೆ ಇಲ್ಲವಷ್ಟೆ?”-ಎಂದು ಕುಶಲ ಪ್ರಶ್ನೆ ಮಾಡಿದ.

“ಇಲ್ಲ-ಏನೂ ಇಲ್ಲ-ಅಂದರೆ, ತೊಂದರೆ ಅಂತಾನೇ ಅಲ್ಲ....ಆದರೆ ನಮ್ಮ ಪಾಳೆಯದಲ್ಲಿ ಸ್ಥಿತಿ—ಎಲ್ಲಾ ಸಮರ್ಪಕವಾಗಿದೆ ಅನ್ನೋ ಹಾಗಿಲ್ಲ. ಇವತ್ತು ಬೆಳಿಗ್ಗೆ ಒಬ್ಬ ಕಾಡಿಗನಿಗೂ ನನಗೂ ಸ್ವಲ್ಪ ಹೊಡೆದಾಟ ಆಯಿತು. ರಕ್ತಪಾತವಾಯಿತು; ಅವನು ಮಹಾ ದ್ವೇಷಿ ಮತ್ತು ಸೇಡಿಗ ಅಂತ ನನಗೆ ಗೊತ್ತು; ಆದ್ದರಿಂದ ಮುಂದೆ ತೊಂದರೆ ಕಾದಿದೆ—ಅಂತ ತೋರುತ್ತಾ ಇದೆ ನನಗೆ. ಈ ಮಧ್ಯೆ ಕಡಲ್ಗಳ್ಳ ಡರ್‌ವರ್ಡ್ ಬೇರೆ, ಈ ದ್ವೀಪಗಳ ಮಧ್ಯೆ ಸುಳಿದಾಡುತ್ತ, ನಮ್ಮ ಪಾಳೆಯದ ಮೇಲೆ ಬೀಳೋಕೆ ಹೊಂಚುತ್ತಿದ್ದಾನೆಂದು ವದಂತಿ ಇದೆ. ಇದರಲ್ಲಿ ಎಷ್ಟು ನಿಜ ಇದೆಯೋ ನಾನು ಊಹಿಸಲಾರೆ; ಆದರೆ ಫೋಮಿನ ಕ್ಯಾಪ್ಟನ್ ಗ್ಯಾಸ್ಕೊಯಿನ್ ನಮ್ಮ ಕುಟೀರಕ್ಕೆ ಬಂದಿದ್ದ; ಅವನು ಈ ಕಡಲ್ಗಳ್ಳನನ್ನ ಕಂಡಿದ್ದನಂತೆ. ಆ ಕಳ್ಳ ಬಹಳ ಎದೆಗಾರ

ನಾಗಿರೋದರಿಂದ, ಅವನು ಯಾವುದಕ್ಕೂ ಹಿಂಜರಿಯೋ ಮನುಷ್ಯ ನಲ್ಲ. ಮಿಶನರಿಗಳಿರೊ ಪಾಳ್ಯ—ಅಂತ ಅವನಿಗೆ ಧರ್ಮಬುದ್ಧಿಯೇನೂ ಇಲ್ಲಾ ಎಂದು ನಿಮಗೆ ತಿಳಿದೇ ಇದೆ.''

" ನನಗೆ ಆ ಹೆದರಿಕೆ ಇಲ್ಲ. ಈ ದ್ವಿಪಗಳಲ್ಲಿ ಕ್ರೈಸ್ತರ ಪಾಳೆಯ ಇರೋ ದ್ವೀಪಗಳು—ಅವು ಇಲ್ಲದೆ ಇರೋ ದ್ವೀಪಗಳಿಗಿಂತ ಎಷ್ಟೋ ಸುರಕ್ಷಿತ—ಅದಿರಲಿ, ನಿನಗೂ ಆ ಕಾಡಿಗನಿಗೂ ಜಗಳ ಆದದ್ದನ್ನು ಕೇಳಿ ನನಗೆ ವ್ಯಥೆಯಾಗಿದೆ. ಅವನ ಪ್ರಾಣಕ್ಕೆ ಏನೂ ಅಪಾಯವಿಲ್ಲ ವಲ್ಲ ? ''

" ಅಪಾಯವೇನೂ ಇಲ್ಲ; ಆ ಕೇಡಿಗನ ತೋಳಿನ ಮೇಲೆ ಮಾತ್ರ ಗಾಯವಾಯಿತು—ಅಷ್ಟೆ."

—ಎಂದು ಹೇಳಿ ಯುವಕ, ಆ ಬೆಳಿಗ್ಗೆ ನಡೆದ ಘಟನೆಯನ್ನು ವಿವರಿಸಿದ. ಈ ಸಮಯದಲ್ಲಿ ಹುಡುಗ ಕಾರಿ, ಇನ್ನೊಂದು ಕೊಠಡಿ ಯಲ್ಲಿ ಮಾತನಾಡುತ್ತಿದ್ದುದೂ—ನಗುತ್ತಿದ್ದುದೂ ಕೇಳಿಸಿತು. ಮಿಶ ನರಿ '' ಹೋ, ಕಾರೀ ! '' ಎಂದು ಅವನನ್ನು ಕರೆದ.

'' ಅವನೇ ನಾನು ! ''—ಎನ್ನುತ್ತ ಕಾರಿ, ಇವರಿದ್ದಲ್ಲಿಗೆ ಬಂದ.

"ಹ್ಞಾ! ಧ್ವನಿ ಇಂದಾನೇ ಗೊತ್ತಾಯಿತು—ನೀನು ಅಂತ. ಇಲ್ಲಿ ನೋಡು, ನೀನೊಂದು ಕೆಲಸ ಮಾಡಬೇಕು—ನನಗೆ. ಈಗಲೆ ಓಡಿ ಹೋಗಿ, ಆದಷ್ಟು ಬೇಗ ಇಲ್ಲೀಗೆ ಬರಬೇಕೂಂತ, ಓಲ್‌ಥಾರ್‌ವಲ್ಡ್‌ಗೆ- ಹೇಳಿಬಿಟ್ಟು ಬಾ. ಅವರ ಹತ್ತಿರ ತುರುತಾಗಿ ಮಾತಾಡೋದಿದೆ; ತಡಮಾಡೋಹಾಗಿಲ್ಲ. ಹೊರಡು—ನೀನು ಬಹಳ ಒಳ್ಳೇ ಹುಡುಗ."

ಕೂಡಲೆ ಹುಡುಗ ಕೊಠಡಿಯಿಂದ ನೆಗೆಯುತ್ತ ಹೊರಟ. ಹೊರಗೆ, ಹೊಲದಲ್ಲಿ ಒಬ್ಬ ಸ್ಥಳಿಗ, ಇವನ ಕಡೆಗೆ ಬೆನ್ನುಮಾಡಿ ಕೊಂಡು-ಬಗ್ಗಿ-ಕಳೆ ಕೀಳುತ್ತಿದ್ದ. ಕಾರಿ, ಮೆಲ್ಲಗೆ ಹಿಂದಿನಿಂದ ಅವನ ಬಳಿಗೆ ಹೋಗಿ, ಆ ಅರೆಬೆತ್ತಲೆ ಮನುಷ್ಯನ ಬೆನ್ನಿನ ಮೇಲೆ ಬಲವಾಗಿ ಒಂದು ಸಲ ತಟ್ಟಿ,

"ಹಲೋ, ಜಾಕೋಲು ! ಭಾರಿ !—ಭಾರಿ ಕೆಲಸ—ಮಗೂ ! ಹುರ್ರಾ!"

–ಎಂದು ಕೂಗುತ್ತ, ಮುಂದಕ್ಕೆ ಓಡಿದ. ಹುಡುಗನ ಕುಚೇಷ್ಟೆಗೆ ಗುರಿಯಾದ ಈ ಕಪ್ಪಿಗ, ಒಳ್ಳೆ ಮೈಕಟ್ಟಿನ, ಎತ್ತರವಾದ ಪ್ರಾಯದ ಮನುಷ್ಯ. ಫ್ರೆಡೆರಿಕ್‌ಮೇಸನಿನ ಕಪ್ಪುವರ್ಣದವರ ಗುಂಪಿಗೆ ಸೇರಿದ್ದ ಇವನು, ಹಲವು ವರ್ಷಗಳಿಂದ ಬಹು ಒಳ್ಳೆ ನಡತೆಯಿಂದ ಇರುತ್ತ, ತುಂಬಾ ಉತ್ಸಾಹಶಾಲಿಯಾಗಿದ್ದ.

ಒಂದೆರಡು ನಿಮಿಷಗಳಲ್ಲೇ ಮಾಸ್ಟರ್ ಕಾರಿ, ಓಲ್‌ಥಾರ್ ವಲ್ಡ್‌ನ–ಮನೆ ತಲುಪಿದ. ಮಧ್ಯವಯಸ್ಸಿನ ಈ ವರ್ತಕ ನಾರ್ವೆ ದೇಶದವನು. ಇಂಗ್ಲೆಂಡಿನಲ್ಲಿ ಹಲವುಕಾಲ ಇದ್ದು, ಇಂಗ್ಲಿಷ್ ಭಾಷೆಯನ್ನು ಚೆನ್ನಾಗಿ ಕಲಿತಿದ್ದ. ತಾನು ನಾರ್ವೇಯರ ಪುರಾತನ ಸಮುದ್ರಪತಿಗಳ ವಂಶೀಯನೆಂದು, ಬಹಳ ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದ. ಇವನು ಕಾರಿಯ ಚಿಕ್ಕಪ್ಪನೂ—ಪಾಲಕನೂ ಆಗಿದ್ದ. ಹುಡುಗ ಇವನನ್ನು ಕಾಣುತ್ತಲೆ,

"ಹೋ! ಓಲ್ ಚಿಕ್ಕಪ್ಪ! ನೋಡಿ—ಭಾರಿ ಕೆಲಸ!—ಭಾರಿ ಭಾರಿ ಕೆಲಸ!!—ಈಕ್ಷಣಾನೇ! ಅಯ್ಯೋ!—ಅಯ್ಯೋ! ಅಯ್ಯೋ!! —ಏನೇನೂ ಅಂತ? ಗಾಯಗಳು! ರಕ್ತ!!—ಆಮೇಲೆ ಕೊಲೆ!—ಕೊಲೆ!!—ಅಂದರೆ ಕನಿಷ್ಟಪಕ್ಷ—ಕೊಲೆ ಪ್ರಯತ್ನ! ಪಾಳೆಯಕ್ಕೆ ಪಾಳೆಯಾನೇ ಆಯುಧ ಹಿಡಿದಿದೆ!—ನೀವು ಕಮಾಂಡರಾಗಬೇಕೂಂತ ನಮ್ಮ ರೆವೆರೆಂಡು ಹೇಳಿಕಳಿಸಿದ್ದಾರೆ!"—ಎಂದ.

ಥಾರ್‌ವಲ್ಡ್ ಆಶ್ಚರ್ಯದಿಂದ,—

"ಎಲಾ, ಏನೋ ನೀನು ಹೇಳುತ್ತಿರೋದು?"–ಎಂದು ಕೇಳಿದ.

ಓಲ್‌ಥಾರ್‌ವಲ್ಡ್—ಹಿಂದೆ, ಸ್ವಲ್ಪಕಾಲ, ಒಂದು ಪಡೆಯಲ್ಲಿ ಸೈನಿಕನಾಗಿದ್ದ. ಆದಕಾರಣ, ಈ ಪಾಳೆಯದ ಸೈನ್ಯ ಶಾಖೆಯ ಮುಖಂಡನನ್ನಾಗಿ ಅವನನ್ನು ನೇಮಿಸಿದ್ದರು. ಈ ಸೈನ್ಯ ಶಾಖೆಯಲ್ಲಿ ಮೂವತ್ತು ಮಂದಿ ಬಿಳಿಯರಿದ್ದರು. ಅವರ ಬಳಿ ಹದಿನಾಲ್ಕು ಬಂದೂಕುಗಳು, ಇಪ್ಪತ್ತು ಬಾಕುಗಳು—ಹದಿನೈದು ಕತ್ತಿಗಳು ಮತ್ತು ಎಂಟು ರಾವುತರ ಪಿಸ್ತೂಲುಗಳು ಇದ್ದವು. ಇವ

ರಲ್ಲದೆ, ಕ್ರಿಸ್ತಮತಕ್ಕೆ ಸೇರಿ, ಪಾಳಯದಲ್ಲಿ ನೆಲಸಿದ್ದ ಕಪ್ಪು ಜನರ ಪೈಕಿ, ಇನ್ನೂರು ಮಂದಿ, ಪಡೆಯಲ್ಲಿದ್ದರು. ಇವರ ಬಳಿ ಬಲವಾದ ದೊಣ್ಣೆಗಳೂ, ಕಲ್ಲುಕೊಡಲಿಗಳೂ— ಈಟಿ—ಭಲ್ಲೆಗಳೂ ಇದ್ದುವು. ಓಲ್ ಥಾರ್‌ವಲ್ಡ್, ತಾನು ಓದುತ್ತಿದ್ದ ಪುಸ್ತಕ ಮುಚ್ಚಿ ಕೆಳಗಿಟ್ಟು—ಕನ್ನಡಕವನ್ನು—ವಿಶಾಲವಾದ ಹಣೆಯ ಮೇಲಕ್ಕೆ ಸರಿಸುತ್ತ,

"ಮಗು, ಏನೋ ನಿನ್ನ ಮಾತಿನ ಅರ್ಥ?" ಎಂದು ಪುನಃ ಕೇಳಿದ.

"ಏನೂ ಅಂದರೆ-ಮಗು ಏನು ಹೇಳಿದನೋ ಅದೇ!" ಎಂದ ಕಾರಿ.

"ಹಾಗಾದರೆ, ದಯವಿಟ್ಟು ಇನ್ನೂ ಸ್ವಲ್ಪ ಸೇರಿಸಿ ಹೇಳು"

ಥಾರ್‌ವಲ್ಡ್, ಈ ಮಾತುಗಳನ್ನ ಸಾಧುವಾದ ಧ್ವನೀಲೇ ಹೇಳಿದ; ಆದರೆ, ಹಠಾತ್ತಾಗಿ, ಒಂದು ಹಳೇ ನೀರಿನ ಹೂಜಿಯ ಹಿಡಿಗೆ ಕೈಹಾಕಿದ. ಈಗ ಸರಿಯಾಗಿ ನಡೆದುಕೊಳ್ಳದಿದ್ದರೆ, ಬಾಗಿಲು ತಟಾಯಿಸುವುದರೊಳಗೇ ಅದು ತನ್ನ ತಲೆಗೆ ನೇರವಾಗಿ ಎರಗುವು ದೆಂದು—ಹುಡುಗ ಅನುಭವದಿಂದ ತಿಳಿದುಕೊಂಡಿದ್ದ. ಆದ್ದರಿಂದ, ಅವನು ಈಗ ವಿನಯ ಭಾವದಿಂದ-ತಾನು ಬಂದ ಕೆಲಸದ ಉದ್ದೇಶ ವನ್ನು ಹೆಚ್ಚು ವಿವರವಾಗಿ ತಿಳಿಸುವ ಮನಸ್ಸು ಮಾಡಿದ. ಅವನು ಹೇಳಿದ್ದನ್ನೆಲ್ಲಾ ಕೇಳಿದಮೇಲೆ,

"ಹುಂ! ಹುಂ! ಹೀಗೋ ವಿಷಯ!"

—ಎನ್ನುತ್ತ, ಸಮುದ್ರಪತಿಗಳ ವಂಶೀಯ, ಎದ್ದು, ನಿಧಾನ ವಾಗಿ, ಒಂದು ದೊಡ್ಡ-ಹಳೆಯ, ರಾವುತರ ಕತ್ತಿ ಇದ್ದ ಪಟ್ಟಿಯನ್ನು ಸೊಂಟಕ್ಕೆ ಕಟ್ಟಿಕೊಳ್ಳುತ್ತ,

"ಈಸಲ ಎರಡು ತರಹ ತೊಂದರೆ ಹುಟ್ಟಿಕೊಳ್ಳುತ್ತಾ ಇರೋ ಹಾಗಿದೆ. ಒಳ್ಳೇದು!—ನೋಡೋಣ!—ನೋಡೋಣ!!—ಎಲ್ಲ ರಿಗೂ ಎಚ್ಚರಿಕೆ ಕೊಡಬೇಕು; ಹೋಗು ಮಗು, ಟೆರೆನ್ಸ್-ಮತ್ತೆ-ಹ್ಯೂ ಮತ್ತೇ—"

"ಒಟ್ಟಿನಲ್ಲಿ ಇಡೀ ಸೈನ್ಯ ಅಂತ ಹೇಳಿ; ನೀವು ಬಹಳ ನಿಧಾನ-ಚಿಕ್ಕಪ! ನೂರು ವರ್ಷಕ್ಕೆ ಹಿಂದೆ ಇರಬೇಕಾಗಿತ್ತು ನೀವು!"

ಮುಂದೆ ಏನು ಮಾತು ಕಥೆ ಬೆಳೀತಿತ್ತೋ ಹೇಳೋದು ಕಷ್ಟ. ಆದರೆ, ಸರ್ರನೆ ಎಸೆಯಲ್ಪಟ್ಟ ನೀರಿನ ಹೂಜಿಯಿಂದ, ಮಾತು ಕತ್ತರಿಸಿದ ಹಾಗಾಯಿತು. ಸುಳು ಕಂಡ ಚುರುಕು ಹುಡುಗ ಕಾರಿ-ಕೊಠಡಿಯಿಂದ ಹೊರಗೆ ಓಡುತ್ತ, ಬಾಗಿಲನ್ನು ಎಳೆದುಕೊಂಡ. ಹೂಜಿ ಆ ಬಾಗಿಲಿಗೆ ತಾಗಿ ಬಿತ್ತು. ಕಾರಿ, ಪಾಳೆಯದವರಿಗೆಲ್ಲ-ಆಯುಧ ಪಾಣಿಗಳಾಗುವಂತೆ ಎಚ್ಚರಿಕೆ ಕೊಡಲು ದೌಡಾಯಿಸಿದ.

---

೬

## ಭೀಷಣ ಕದನ

ಇದುವರೆಗೆ ತಿಳಿಸಿರುವ ವಿಷಯಗಳೆಲ್ಲ ನಡೆದ ಮಾರನೆಯ ದಿನ ಭಾನುವಾರ. ಸ್ಯಾಂಡಿಕೊಲ್ಲಿ ಪಾಳೆಯದ ಮೇಲೆ, ಶುಭ್ರವಾದ ಆಕಾಶದಿಂದ ಬೆಳಗುತ್ತಿದ್ದ ಪ್ರಾತಃಕಾಲ, ಮನೋಹರವಾಗಿತ್ತು. ಪ್ರಕೃತಿಯ ಗಭೀರವಾದ ಶಾಂತಿ, ಮನುಷ್ಯರ ಉಗ್ರವಾದ ತಿಕ್ಕಾಟ-ಹೋರಾಟಗಳಿಂದ ಇನ್ನೂ ಭಂಗವಾಗಿರದಿದ್ದರೂ, ಹಿಂದಿನ ರಾತ್ರಿಯ ಸನ್ನಾಹಗಳಿಂದ, ದಿನದ ಉಳಿದ ಭಾಗವನ್ನು, ದ್ವೀಪದ ಮೇಲಿದ್ದವರು, ನೆಮ್ಮದಿಯಾಗಿ ಕಳೆಯಲಾರರು—ಎಂದು ನಿರೀಕ್ಷಿಸಬಹುದಾಗಿತ್ತು. ಈ ಶಾಂತಿ, ಘೋರವಾದ ಚಂಡಮಾರುತಕ್ಕೆ ಮೊದಲು ಕಾಣುವ ಶಾಂತಿಯಾಗಿತ್ತು. ದುಗುಡ ಎನ್ನುವುದಿಲ್ಲದೆ, ದೃಢಮನಸ್ಕರಾಗಿ, ಎಲ್ಲರೂ ಈ ಭಾನುವಾರ ಕದನಕ್ಕೆ ಸಿದ್ಧರಾಗಿ ಕಾದಿದ್ದರು.

ಸ್ಯಾಂಡಿಕೊಲ್ಲಿ ಪಾಳೆಯಕ್ಕೆ ಬಹಳ ದೂರವಾಗಿದ್ದ, ದ್ವೀಪದ ಒಂದು ಭಾಗದ ದಟ್ಟವಾದ ಕಾಡಿನಲ್ಲಿ, ಪಿಶಾಚಿಗಳಂತೆ ಕಾಣುತ್ತಿದ್ದ ಕಾಡುಮನುಷ್ಯರ ಒಂದು ಗುಂಪು, ಕಾರಣವಿಲ್ಲದೆ ತಮ್ಮ ಹತ್ತಿರ ನೆಲೆಸಿದವರಮೇಲೆ ಬೀಳುವ ತಮ್ಮ ದಸ್ಯು ಚಾಳಿಗನುಗುಣವಾಗಿ, ಸಿದ್ಧತೆ ಮಾಡಿಕೊಳ್ಳುತ್ತಿದ್ದರು.

ಇವರೆಲ್ಲ ಹೆಚ್ಚುಕಡಿಮೆ ಬೆತ್ತಲೆಯಾಗಿದ್ದರೂ, ಮೈತುಂಬ ಚಿತ್ರ ವಿಚಿತ್ರವಾಗಿ ಹಚ್ಚೆಹೊಯ್ದುಕೊಂಡಿದ್ದರಿಂದ, ಇವರ ಮೈ ಮುಚ್ಚದೇ ಇದ್ದರೂ-ಮುಚ್ಚಿದಂತೆಯೇ ಕಾಣುತ್ತಿತ್ತು. ಗಟ್ಟಿಮರದ ಭಾರಿಭಾರಿ ದೊಣ್ಣೆಗಳು-ಈಟಿಗಳು ಮತ್ತು ಬಿಲ್ಲುಬಾಣಗಳೇ ಇವರ ಮುಖ್ಯವಾದ ಆಯುಧಗಳಾಗಿದ್ದುವು. ಕೈಕೈ ಯುದ್ಧದಲ್ಲಿ ಒಂದು ವೇಳೆ ಸಿಕ್ಕಿಬಿದ್ದರೆ, ನುಣುಚಿಕೊಳ್ಳಲು ಸುಲಭವಾಗಿರುವಂತೆ, ಇವರು ಮೈಗೆಲ್ಲಾ ಏನೋ ಒಂದುತರಹ ಎಣ್ಣೆ ಬಳಿದುಕೊಂಡಿದ್ದರು. ಇದರಿಂದ, ಇವರ ಮೈಗಳೆಲ್ಲಾ, ಬಿಸಿಲಿನಲ್ಲಿ ಥಳ ಥಳ ಹೊಳೆಯುತ್ತ ಲೋಹದಂತೆ ಮಿರುಗುತ್ತಿದ್ದವು.

ಕೊರಳಿನಿಂದ ಜೋತುಬಿದ್ದಿದ್ದ ಉರಲಿನಲ್ಲಿ, ಏಟುಬಿದ್ದ ಬಲ ತೋಳನ್ನು ತೂಗಿಕೊಂಡು, ಈ ಭಯಂಕರ ವ್ಯಕ್ತಿಗಳ ಮಧ್ಯೆ ತಿರುಗಾಡುತ್ತಿದ್ದ ಕಿಯೋನ, ಹೆಚ್ಚಾಗಿ ಕಣ್ಣಿಗೆ ಬೀಳುತ್ತಿದ್ದ. ನೋವಿನಿಂದಲೂ—ಪ್ರತೀಕಾರ ಭಗ್ನದಿಂದಲೂ, ಮೊದಲೇ ಪೈಶಾಚಿಕವಾದ ಇವನ ಮೋರೆ ಇನ್ನೂ ವಿಕಟವಾಗಿ ಭಯೋತ್ಪಾದಕವಾಗಿತ್ತು. ಬಿಳಿಯರಿಂದ, ತನ್ನ ಮೂಲಕ, ಅವರಿಗೆಲ್ಲಾ ಆದ ಅವಮಾನಕ್ಕೂ—ಘಾತಕ್ಕೂ ತಕ್ಕ ಪ್ರತೀಕಾರವನ್ನು ಕೈಕೊಳ್ಳುವಂತೆ, ಅವರನ್ನೆಲ್ಲ ಹುರಿದುಂಬಿಸುತ್ತ ಸುತ್ತಾಡುತ್ತಿದ್ದ.

ಇವರೆಲ್ಲ, ಬಹು ಬೇಗ, ಯಾವುದಕ್ಕೂ ಹಿಂಜರಿಯದವರಂತೆ ಸಿದ್ಧರಾದರು. ಇವರ ಪಾಳೆಯದಲ್ಲಿ ಈ ರೀತಿ ಸಿದ್ಧತೆಗಳಾಗುತ್ತಿದ್ದಾಗ—ಬಿಳಿಯರ ಪಾಳೆಯದಲ್ಲಿ ಏನು ನಡೆಯುತ್ತಿದೆಯೋ ನೋಡೋಣವೆಂದು—ಕಿಯೋನ, ಹತ್ತಿರದ ಬೆಟ್ಟದನೆತ್ತಿಗೆ ಹತ್ತಿಹೋಗಿದ್ದವನು—ಹಿಂತಿರುಗುತ್ತಿದ್ದ. ಆಗ, ಇಂಗ್ಲಿಷ್ ಸಾರ್ವಭೌಮರ **ಟಾಲಿಸ್ಮನ್** ಹಡಗಿನ ಕಮಾಂಡರ ಕೈಗೆ ಬಿದ್ದರೆ ಅನಿವಾರ್ಯವಾಗಿದ್ದ, ಬಲಾತ್ಕಾರದ ಸರ್ಕಾರಿ ಸೇವೆಯನ್ನು ತಪ್ಪಿಸಿಕೊಳ್ಳುವುದಕ್ಕಾಗಿ–ದ್ವೀಪದ ತೀರದ ಮೇಲೆ ತಲೆಮರೆಸಿಕೊಂಡಿದ್ದ, **ಫೋಮಿನ** ನಾವಿಕರ ಪೈಕಿ ಕೆಲವರ ಕಣ್ಣಿಗೆ ಬಿದ್ದ. ಹಿಂದೆ ತಿಳಿಸಿದಂತೆ, ಇವರೇ ಕಾರಿ ಕಂಡ ಹಾಗೆ, ಅವನನ್ನು ಅಟ್ಟಿಸಿಕೊಂಡು ಹೋದವರು.

ಸ್ಯಾಂಡೀ ಕೊಲ್ಲಿ ಪಾಳೆಯಕ್ಕೆ ಸಮೀಪವಾಗಿ, ಒಳಪ್ರದೇಶದಲ್ಲಿ ಒಂದು ಉನ್ನತವಾದ ದಿಣ್ಣೆ ಇದೆ. ಇದರ ಮೇಲಿದಿಂದ ಪಾಳೆಯವೂ, ಅದರ ಸುಂದರವಾದ ಚರ್ಚಿನ ಗೋಪುರವೂ, ಆಚೆಗೆ, ಶಾಂತವಾದ ಕೊಲ್ಲಿಯೂ, ಅದರಲ್ಲಿ ಲಂಗರು ಬಿಟ್ಟಿದ್ದ ಕಾವಲು ನಾವೆ—**ಟಾಲಿಸ್ಮನೂ**, ಇನ್ನೂ ದೂರದಲ್ಲಿ, ಸಮುದ್ರದ ಉಬ್ಬರಕ್ಕೆ ತಡೆಯಾಗಿ, ರಕ್ಷಿಸುತ್ತಿದ್ದ ಹವಳಕಟ್ಟೆಯ ಸಾಲೂ, ಪೂರ್ತಿಯಾಗಿ, ಮನೋಹರವಾಗಿ ಕಾಣುತ್ತಿದ್ದವು.

ಈ ಭಾನುವಾರ—ಬೆಳಗಿನ ಉಪಾಹಾರ ಮುಗಿಸಿಕೊಂಡು, ರೆವೆರೆಂಡ್ ಮೇಸನ್, ತನ್ನ ಚಿಕ್ಕ ಮಗಳು ಅಲೀಸಳೊಡನೆ-ಸ್ವಲ್ಪ ಹೊತ್ತು ವಿಹರಿಸಿಕೊಂಡು ಬರಲು ಈ ದಿಣ್ಣೆಗೆ ಹೋದ. ಪ್ರತಿ ಭಾನುವಾರವೂ ಹೀಗೆ ಇಲ್ಲಿಗೆ ಮಗಳೊಡನೆ ಬಂದು, ಬೈಬಲಿನಿಂದ ಯಾವುದಾದರೂ ಅಧ್ಯಾಯವನ್ನು ಓದುವುದೂ, ಮತ್ತು ತಮ್ಮಿಬ್ಬರಿಗೂ ಪ್ರಿಯವಾಗಿದ್ದು ಕಣ್ಮರೆಯಾಗಿದ್ದ ವ್ಯಕ್ತಿಯೊಂದನ್ನು ಜ್ಞಾಪಿಸಿಕೊಳ್ಳುವುದೂ ಅವನ ವಾಡಿಕೆಯಾಗಿತ್ತು. ಅಲೀಸಳ ಸೇವೆಗಾಗಿ, ಸ್ಥಳೀಯ ಕಪ್ಪಿಗರ ಹೆಣ್ಣು ಒಂದಿತ್ತು; ಅವಳ ಹೆಸರು ಕೆಕುಪೂಪಿ ಎಂದು. ಆದರೆ ಎಲ್ಲರೂ ಅವಳನ್ನು "ಪೂಪಿ" ಎಂದು ಕರೆಯುತ್ತಿದ್ದರು. ಇವಳೂ ಆಗಾಗ ಇಲ್ಲಿ ಇವರೊಡನೆ ಬಂದು ಸೇರುವ ಅವಕಾಶವಿತ್ತು. ನಿರ್ದಿಷ್ಟವಾದ ಈ ಭಾನುವಾರ ಬೆಳಿಗ್ಯೆ, ಈ ದಿಣ್ಣೆಯ ಮೇಲೆ ಇವರಿಷ್ಟೇ ಮಂದಿ ಇರಲಿಲ್ಲ. ಸುಮಾರು ಐವತ್ತು ಗಜಗಳಿಗೂ ಸ್ವಲ್ಪ ಹತ್ತಿರದಲ್ಲೆ—ಪೊದೆ ಮೆಳೆಗಳಲ್ಲಿ ಆಯುಧಪಾಣಿಗಳಾದ ಒಂದು ಗುಂಪು ಕಾಡಿಗದಸ್ಯುಗಳು ಅವಿತುಕೊಂಡಿದ್ದರು. ಇವರು, ಪಾಳೆಯದ ಬೇಹಿನವರ ಕಣ್ಣಿಗೆ ಮಣ್ಣೆರಚಿ—ಕಾವಲಿರದ ಒಂದು ಹಾದಿಯಲ್ಲಿ ಪಾಳೆಯವನ್ನು ಸಮೀಪಿಸಿದ್ದರು.

ಪಾಳೆಯದ ಮಂದಿಗೆ ಎಚ್ಚರಿಕೆ ಕೊಡದ ರೀತಿಯಲ್ಲಿ, ಇವರು ಮಿಶನರಿಯನ್ನೂ—ಅವನ ಜೊತೆಯಲ್ಲಿದ್ದವರನ್ನೂ ಕೊಂದು ಹಾಕಬಹುದಾಗಿತ್ತು; ಅಥವಾ ಸೆರೆ ಹಿಡಿಯಬಹುದಾಗಿತ್ತು. ಆದರೆ,

ಹಾಗೆ ಮಾಡುವುದು ಅವರ ಧಾಳಿಯ ಏಪಾರ್ಟಿಗೆ ವಿರೋಧವಾಗಿದ್ದುದರಿಂದ, ಕೈತಡೆದರು. ಆದ್ದರಿಂದ ಈ ಮೂವರೂ, ಬೈಬಲ್ ಅಧ್ಯಾಯದ ಪಠನವನ್ನೂ—ಬೆಳಗಿನ ಪ್ರಾರ್ಥನೆಯನ್ನೂ ಯಾವ ಅಡಚಣೆಯೂ ಇಲ್ಲದೆ ಮುಗಿಸಿದರು. ತಾವು ಮಾಡುತ್ತಿದ್ದುದನ್ನು, ಎಷ್ಟುಜೊತೆ ಕ್ರೌರ್ಯದಿಂದ ಹೊಳೆಯುವ ಕಣ್ಣುಗಳು ನೋಡುತ್ತಿದ್ದವೆಂಬುದರ ಅರಿವೇ ಅವರಿಗಿರಲಿಲ್ಲ.

ಚರ್ಚಿನಲ್ಲಿ ಭಾನುವಾರ ಬೆಳಗಿನ ಗಂಟೆ ಸದ್ದಾಯಿತು. ಕೂಡಲೆ ನಮ್ಮ ಕ್ರೈಸ್ತಬೋಧಕ, ಜೊತೆಯವರೊಡನೆ-ದಿಣ್ಣೆಯಿಂದಿಳಿದು ಮನೆ ಸೇರಿದ. ಪಾಳೆಯದ ಕ್ರೈಸ್ತರು, ಬಿಳಿಯರು-ಕರಿಯರು-ಚಿಕ್ಕವರು-ದೊಡ್ಡವರು, ಎಲ್ಲ-ಗುಂಪು ಪ್ರಾರ್ಥನೆಗಾಗಿ ದೇವಾಲಯಕ್ಕೆ ಸಾಲು ಸಾಲಾಗಿ ಬಂದು ಸೇರುತ್ತಿದ್ದರು.

ಗಂಟೆ ಶಬ್ದ ನಿಲ್ಲುವುದಕ್ಕೆ ಬಹಳ ಮುಂಚೆಯೇ ಚರ್ಚು ಕಿಕ್ಕಿರಿದು ತುಂಬಿಹೋಗಿತ್ತು. ಇವರಲ್ಲಿ ಕರಿಯರೇ ಹೆಚ್ಚಾಗಿದ್ದರು. ಸ್ಥಳವಿಲ್ಲದೆ ಎಷ್ಟೋ ಮಂದಿ ಬಾಗಿಲಲ್ಲೂ—ತೆರೆದ ಕಿಟಕಿಗಳಲ್ಲೂ ನಿಂತಿದ್ದರು. ಈ ಭಾನುವಾರ ಸಭೆಯಲ್ಲಿ ಹೊಸಬರು ಕೆಲವರಿದ್ದರು. ಸೇರಿದ್ದ ಜನ ಇವರನ್ನು ಕುತೂಹಲದಿಂದ ಗಮನಿಸುತ್ತಿದ್ದರು. ಮಿ|| ಮೇಸನ್ ಬರುವುದಕ್ಕೆ ಸ್ವಲ್ಪ ಮುಂಚೆ, ತನ್ನ ಅಧಿಕಾರಿಗಳು ಮತ್ತು ನಾವಿಕರೊಡನೆ, ಕ್ಯಾಪ್ಟನ್ ಮಾಂಟೆಗೋ ಪ್ರವೇಶಿಸಿದ. ದ್ವಾರಪಾಲಕ ಕೆಲಸ ಮಾಡುತ್ತಿದ್ದ ಮಾಸ್ಟರ್ ಕಾರಿ, ಇವರನ್ನೆಲ್ಲ ಕರೆದೊಯ್ದು ಪ್ರತ್ಯೇಕವಾದ ಸ್ಥಳದಲ್ಲಿ ಕೂರಿಸಿದ. ಕ್ಯಾಪ್ಟನ್ ಮಾಂಟೆಗೋ, ದಸ್ಯುಗಳು ಬೇಗ ಧಾಳಿ ನಡೆಸುವ ಸಂಭವ, ಎಷ್ಟರ ಮಟ್ಟಿಗೆ ಇದೆ—ಎಂದು ಮೇಸನಿನಿಂದ ತಿಳಿದುಕೊಳ್ಳುವುದಕ್ಕೋಸ್ಕರ, ತೀರದ ಮೇಲೆ ಬಂದಿದ್ದ.

ಪೂಪಿ ಬಂದು, ಒಬ್ಬ ನಾವಿಕಾಧಿಕಾರಿಯ ಪಕ್ಕದಲ್ಲಿ ಕುಳಿತುಕೊಂಡಳು. ಅವನು ಜಿಗುಪ್ಸೆಯಿಂದಲೂ—ಧಿಕ್ಕಾರದಿಂದಲೂ ಅವಳ ಕಡೆ ನೋಡುತ್ತ, ಸ್ವಲ್ಪ ದೂರ ಸರಿದ. ಕಾರಿ "ಅಲೀಸ್ ಎಲ್ಲಿ ?" ಎಂದು ಪಿಸುಮಾತಿನಲ್ಲಿ ಪೂಪಿಯನ್ನು ಕೇಳಿದ.

"ಅವರಿಗೆ ಸ್ವಲ್ಪ ತಲೆನೋವು ಬಂದಿದೆ"

—ಎಂದಳು ಪ್ರೂಪಿ. ಆ ಹೊತ್ತಿಗೆ ಸರಿಯಾಗಿ ಗ್ಯಾಸ್ಕೋಯಿನ್ ಬಂದ. ಬಂದವನು ನೇರವಾಗಿ—ಸಭೆ ಮಧ್ಯೆ ಬಿಡುವಾಗಿದ್ದ ಓಣಿ ಮಾರ್ಗದಲ್ಲಿ, ಸಾವಧಾನವಾಗಿ ನಡೆದುಹೋಗಿ, ವಿಧವೆ ಸ್ಟೂಯರ್ಟಳ ಪಕ್ಕದಲ್ಲಿ ಕುಳಿತುಕೊಂಡ. ಅವನನ್ನು ನೋಡಿದ ಕೂಡಲೆ, ವಿಧವೆಯ ಮುಖದಲ್ಲಿ ಆಶ್ಚರ್ಯವೂ—ಕಳವಳವೂ ತೋರಿತು. ತಾಯಿಯ ಆಚೆ ಪಕ್ಕದಲ್ಲಿ ಕುಳಿತಿದ್ದ ಹೆನ್ರಿಯ ಮುಖ ಕೆಂಪೇರಿತು. ಅವನು **ಫೋಮಿನ** ಕಾಪ್ಟನಿನ ಕಡೆ ನೋಡಿದ. ಅವನ ನೋಟ ವ್ಯರ್ಥ ವಾಯಿತು. ಕ್ಯಾಪ್ಟನ್ ಗ್ಯಾಸ್ಕೋಯಿನ್, ಬಂದು ಕುಳಿತವನೇ ತನ್ನ ಮುಂದಿನ ಸಾಲಿನ ಆಸನದ ಬೆನ್ನಿನಮೇಲೆ, ತೋಳುಗಳನ್ನು ಮಡಿಸಿ, ಅವುಗಳ ಮೇಲೆ ಬಾಗಿ, ತನ್ನ ತಲೆ ಇಟ್ಟುಕೊಂಡು ಕುಳಿತ. ಪ್ರಾರ್ಥನೆ ನಡೆಯುತ್ತಿದ್ದಾಗ ಅಲ್ಲಾಡದೆ ಹೀಗೇ ಕೂತಿದ್ದ.

ಮೇಸನ್ ಬೋಧನೆ ಮಾಡುತ್ತಿದ್ದಾಗ—ಇದ್ದಕ್ಕಿದ್ದಹಾಗೆಯೇ ಹೊರಗೆ ಒಂದು ಪಿಸ್ತೂಲು ಶಬ್ದವಾಯಿತು. ಕೂಡಲೆ ಸುತ್ತ ಇದ್ದ ಕಾಡುಪ್ರದೇಶದಿಂದ—ಭೀಷಣವಾದ ಕೂಗಾಟ—ಕೋಲಾಹಲ ಎದ್ದು, --ಕೇಳುವವರ ಕಿವಿಗಳು ನಿಮಿರಿದುವು; ಹೃದಯಗಳು ಕ್ಷಣಕಾಲ ಕುಗ್ಗಿದವು. ಹತ್ತುನಿಮಿಷ ಕಳೆಯುವ ಮೊದಲೇ ಚರ್ಚಿನಲ್ಲಿದ್ದವರೆಲ್ಲ ಹೊರಬಿದ್ದರು. ಕೂಡಲೇ, (ಕಾವಲಿಲ್ಲದ ಒಂದು ಮಾರ್ಗವನ್ನು ಕಂಡು ಕೊಂಡು, ಕಾಣದಹಾಗೆ ನುಸುಳಿ ಬಂದು ಪಾಳೆಯಕ್ಕೆ ನುಗ್ಗಿದ್ದ) ಕ್ರೂರ ಕಾಡಿಗರಿಗೂ ಪಾಳೆಯದ ಗಂಡಾಳುಗಳಿಗೂ ಕೈಕೈ ಹತ್ತಿ ಘೋರವಾದ ಕದನಕ್ಕಾರಂಭವಾಯಿತು.

ದೇವರ ದಯದಿಂದ, ಅಲೀಸಳ ಯೋಗಕ್ಷೇಮದಲ್ಲಿ ಬಹಳ ಆಸಕ್ತ ನಾಗಿದ್ದ ಮಾಸ್ಟರ್ ಕಾರಿ, ಅವಳಿಗೆ ತಲೆ ನೋವೆಂದು ತಿಳಿದಕೂಡಲೆ- ಬೋಧನೆ ಪ್ರಾರಂಭವಾದೊಡನೆಯೇ—ಅವಳನ್ನು ನೋಡಿಕೊಂಡು ಬರುವ ಉದ್ದೇಶದಿಂದ, ಯಾರಿಗೂ ಗೊತ್ತಾಗದ ಹಾಗೆ, ಚರ್ಚಿ ನಿಂದ ಜಾರಿಕೊಂಡು ಹೊರಟಿದ್ದ. ಬೇಗನೆ ಬೋಧಕನ ಮನೆ ತಲು ಪಿದ. ಅಲ್ಲಿ ಒಳಗೆ, ಸೋಫಾದಮೇಲೆ ಅಲೀಸಳು ಗಾಢನಿದ್ರೆಯಲ್ಲಿ

ದ್ದುದೂ, ಅವಳ ಪಕ್ಕದಲ್ಲಿ, ಈಟಿ ಹಿಡಿದ, ಒಬ್ಬ ಕರಾಳ ದಸ್ಯು ನಿಂತಿದ್ದುದೂ ಕಾಣಿಸಿತು. ಕಾರಿ ಬಹಳ ಎಚ್ಚರಿಕೆಯಿಂದ—ಸಪ್ಪಳಿಲ್ಲದ ಹಾಗೆ ಸಮೀಪಿಸಿದ್ದದ್ದರಿಂದ, ದಸ್ಯುವಿಗೆ ಗೊತ್ತಾಗಲಿಲ್ಲ. ತನ್ನ ಪಿಸ್ತೂಲನ್ನು ಅಡಿಗೆ ಮನೆಯ ಮೇಜಿನಮೇಲೆ ಇಟ್ಟಿದ್ದುದು, ಕಾರಿಗ್ಗೆಜ್ಞಾಪಕವಾಯಿತು. ಕೂಡಲೇ ಅವನು ನಿಶ್ಶಬ್ದವಾಗಿಯೇ ಹಿಮ್ಮೆಟ್ಟಿ, ಬಳಸಿ, ಹಿಂದಿನಿಂದ ಹೋಗಿ, ಆ ಆಯುಧವನ್ನು ತೆಗೆದುಕೊಂಡು, ಬಾಗಿಲನ್ನು ಭದ್ರವಾಗಿ ಮುಚ್ಚಿ, ಪುನಃ ಮನೆಯ ಮುಂಭಾಗಕ್ಕೆ ಬಂದಿದ್ದ. ಆಗ ಅಲೀಸಳಿಗೆ ಎಚ್ಚರವಾಗಿ ಕಣ್ಣು ಬಿಟ್ಟಳು. ತನ್ನ ಬಳಿ ನಿಂತಿದ್ದ ಭಯಂಕರ ಮನುಷ್ಯನನ್ನು ನೋಡಿದ ಕೂಡಲೆ,-ಆಶ್ಚರ್ಯದಿಂದಲೂ-ವಿಶೇಷ ಭಯದಿಂದಲೂ ಚೀರಿದಳು.

ಮರುಕ್ಷಣದಲ್ಲೇ ಕಾರಿ, ಅವಳ ಪಕ್ಕಕ್ಕೆ ಎರಗಿಹೋಗಿ, ಆ ದಸ್ಯು ಆ ಬಾಲೆಯನ್ನು ಹಿಡಿದುಕೊಳ್ಳುವ ಮೊದಲೇ, ಅವನ ತಲೆಗೆ ತನ್ನ ಪಿಸ್ತೂಲಿನಿಂತ ಗುರಿಯಿಟ್ಟು ಹಾರಿಸಿದ. ಗೋಲಿ, ಗುರಿ ತಪ್ಪಿ, ಅವನ ಹಣೆಯನ್ನು ಸವರಿಕೊಂಡು ಹೋಯಿತು. ಅದರ ಬೆಂಕಿ-ಹೊಗೆಗಳಿಂದ ದಸ್ಯುವಿಗೆ ಕಣ್ಣು ಕಾಣಿಸದ ಹಾಗಾಯಿತು. ಅವನು ಗಟ್ಟಿಯಾಗಿ ಚೀರುತ್ತ ನೆಲದಮೇಲೆ ಬಿದ್ದುಬಿಟ್ಟ. ಇದೇ, ಚರ್ಚಿನಲ್ಲಿದ್ದವರಿಗೆ ಕೇಳಿಸಿದ ಶಬ್ದ; ಏಟು ತಾಗಿದವನ ಕೂಗನ್ನು ಕೇಳಿ, ಹಿಂದೆಯೇ ಅಡವಿಯಲ್ಲಿ ಅವಿತುಕೊಂಡಿದ್ದ ಅವನ ಕಡೆಯವರು, ಕೂಗಾಡುತ್ತ, ಕೋಲಾಹಲ ಮಾಡುತ್ತ, ಮುನ್ನುಗ್ಗಿ ಧಾಳಿಯನ್ನು ಪ್ರಾರಂಭಿಸಿದ್ದರು.

ಆದರೆ, ಈ ಘಟನೆ,-ದಸ್ಯುಗಳು ನಿಶ್ಚಯಿಸಿದ್ದಕ್ಕಿಂತ ಸ್ವಲ್ಪ ಮುಂಚಿತವಾಗಿಯೇ ನಡೆದದ್ದರಿಂದ, ಪಾಳೆಯದ ಮಂದಿಗೆ, ಶಸ್ತ್ರಧಾರಿಗಳಾಗಲು ಅವಕಾಶ ಕೊಡುವಷ್ಟು-ಮುಂದಾಗಿಯೇ ಎಚ್ಚರಿಕೆ ಕೊಟ್ಟಂತಾಯಿತು. ಇವರೆಲ್ಲ, ಆಯುಧಗಳು ಬೇಗ ಕೈಗೆ ಸಿಕ್ಕುವ ಹಾಗೆ ಕೂಡಿಟ್ಟಿದ್ದರು.

ಕದನ ಪ್ರಾರಂಭವಾಗಿ-ಭಯಂಕರರೂಪವನ್ನು ತಾಳಿತು. ಮೇಲೆ ಬಿದ್ದವರು, ತಾವು, ಪಾಳೆಯದ ಮೇಲೆ ಪತ್ತೆಯಾಗದಹಾಗೆ ಬೀಳಬಲ್ಲೆವೆಂದು—ದೃಢವಾಗಿ ನಂಬಿದ್ದರು. ಆದ್ದರಿಂದ ಅವರು ಧಾಳಿಯಲ್ಲಿ

ಕ್ರಮ—ಶಿಸ್ತು ಏನನ್ನೂ ಏರ್ಪಡಿಸಿಕೊಂಡಿರಲಿಲ್ಲ; ತಮ್ಮ ಮುಖಂಡ ಸನ್ನೆ ಮಾಡಿದ ಕೂಡಲೆ—ಎಲ್ಲರೂ ಚರ್ಚಿನಮೇಲೆ ನುಗ್ಗಿ—ಅಲ್ಲಿದ್ದವರನ್ನೆಲ್ಲ—ಒಟ್ಟಿಗೆ ಕೊಂದುಹಾಕಿಬಿಡುವ ಒಂದೇ ಯೋಚನೆಮಾಡಿಕೊಂಡಿದ್ದರು. ಕದನದ ಗಲಭೆ—ಕೋಲಾಹಲಗಳ ಮಧ್ಯೆ, ದಸ್ಯುಗಳ ಒಂದು ಗುಂಪು, ಮೇಸನಿನ ಮನೆಗೆ ನುಗ್ಗಿ—ಕಾರಿಯನ್ನು ನೆಲಕ್ಕುರುಳಿಸಿ ಓಡಿದ್ದರು. ಹೋಗುತ್ತ, ಅವರಲ್ಲೊಬ್ಬ ಬಿಟ್ಟ ದೊಣ್ಣೆ ಏಟು,–ಗುರಿತಪ್ಪದೆ ಇದ್ದಿದ್ದರೆ, ಕಾರಿಯು ಬುರುಡೆ ಚೂರು ಚೂರಾಗಿ ಬಿಡುತ್ತಿತ್ತು.

ಮೊದಲ ಎಚ್ಚರಿಕೆ ಕೇಳಿದಾಗಲೇ ಗ್ಯಾಸ್ಕೋಯಿನ್—ಥಟ್ಟನೆ ಎದ್ದು, ರಭಸದಿಂದ ಬಾಗಿಲ ಮೂಲಕ ನುಗ್ಗಿ ಹೊರಗೆ ಹೋಗಿದ್ದ ಅವನ ಹಿಂದೆಯೇ ಹೆನ್ರಿ ಸ್ಟೂಯರ್ಟನೂ, **ಟಾಲಿಸ್ಮನಿನ** ಕ್ಯಾಪ್ಟನೂ, ಅವನ ಅಲ್ಪ ಸಂಖ್ಯೆಯ ಅಧಿಕಾರಿಗಳೂ, ನಾವಿಕರೂ ಹೊರಹಾಯ್ದಿದ್ದರು. ಇವರೆಲ್ಲ ಪದ್ಧತಿಯಂತೆ ಶಸ್ತ್ರಧಾರಿಗಳಾಗಿದ್ದರು.

ಗ್ಯಾಸ್ಕೋಯಿನಿನ್ ಹಿಂದೆ ಹೋಗುವ ಮೊದಲು ಹೆನ್ರಿ, ತಾಯಿಯನ್ನು ಕುರಿತು, "ನೀನು ಕುಳಿತಲ್ಲೆ ಇರು ಅಮ್ಮಾ! ಚರ್ಚೇ ಬಹಳ ಸುರಕ್ಷಿತವಾದ ಸ್ಥಳ" ಎಂದು ಹೇಳಿ ಹೋಗಿದ್ದ.

ಹೊರಗೆ ಕದನ ನಡೆಯುತ್ತಿದ್ದಾಗ ಈಕೆ ಮೊಳಕಾಲೂರಿ ದೇವರಲ್ಲಿ ಮೊರೆಯಿಡುತ್ತಿದ್ದಳು.

ಚರ್ಚನ್ನು ಮೊಟ್ಟ ಮೊದಲು ಬಿಟ್ಟವರಲ್ಲಿ ಮೇಸನ್ನೂ ಒಬ್ಬನಾಗಿದ್ದ. ಅರಕ್ಷಿತಳಾಗಿ ಮನೆಯಲ್ಲಿ ಒಬ್ಬಳೇ ಇದ್ದ ತನ್ನ ಮಗು ಆಲೀಸಳ ಯೋಚನೆಯಿಂದ — ಅತ್ಯಂತ ಭೀತನಾಗಿ, ಆಯುಧ ತೆಗೆದುಕೊಳ್ಳುವುದನ್ನೂ ಮರೆತು,—ತನಗೂ—ತನ್ನ ಮನೆಗೂ ಮಧ್ಯೆ ಅಡ್ಡವಾಗಿ ಇದ್ದ ದಸ್ಯುಗಳ ಗುಂಪಿನ ಮೇಲೆ ಹಠಾತ್ತನೆ ಎರಗಿ ನುಗ್ಗಿ, ಎದುರಿಗೆ ಸಿಕ್ಕ ಎಂಟು ಹತ್ತು ಮಂದಿಯನ್ನು ತತ್ತರಗೊಳಿಸಿದ. ಆದರೆ ಅನೇಕ ಮಂದಿಯಿಂದ ಸುತ್ತುವರಿಯಲ್ಪಟ್ಟು, ಅವನು ಮುಂದೆ ನುಗ್ಗಿ ತೂರಿಹೋಗಲು ಅವಕಾಶವಾಗಲಿಲ್ಲ. ಗುಂಪಿನಲ್ಲಿ ಅವನು ತೀರ ಹತ್ತಿರ ಒತ್ತಿ ಹೋಗಿದ್ದರಿಂದ—ಕೆಲವು ಕ್ಷಣಗಳವರೆಗೆ ದಸ್ಯುಗಳು

ತಮ್ಮ ಕೈಲಿದ್ದ ಉದ್ದವಾದ ದೊಣ್ಣೆಗಳನ್ನೂ-ಈಟಿಗಳನ್ನೂ ಪ್ರಯೋಗಿಸಲು ಅವಕಾಶವಾಗಲಿಲ್ಲ.

ಮಿಷನರಿ, ಹುಡುಗನಾಗಿದ್ದಾಗ ಮುಷ್ಟಿಯುದ್ಧ ಕಲಿತಿದ್ದದ್ದು, ಈ ಕೆಲವು ಕ್ಷಣಗಳಲ್ಲಿ ಬಹಳ ಉಪಯೋಗಕ್ಕೆ ಬಂತು. ಇವನು ಬಲು ಚಳಕದಿಂದ, ಬಲವಾಗಿ ಮುಷ್ಟಿಪೆಟ್ಟುಗಳನ್ನು ಕೊಡುತ್ತ, ಕೆಲವು ನಿಮಿಷ ತಲೆ ಉಳಿಸಿಕೊಂಡು ಹೋರಾಡಿದ ಇದರಿಂದ, ಶಸ್ತ್ರಪಾಣಿಗಳಾಗಿದ್ದ ಕ್ಯಾಪ್ಟನ್ ಮಾಂಟಿಗೋ—ಮತ್ತು ಅವನ ಕಡೆಯವರಿಗೆ, —ದೊಂಬಿಯಲ್ಲಿ ಹಾದಿ ಮಾಡಿಕೊಂಡು ನುಗ್ಗಿ, ಮೇಸನ್ ಹೋರಾಡುತ್ತಿದ್ದ ಸ್ಥಳಕ್ಕೆ ಬರಲು ಅವಕಾಶವಾಯಿತು. ಅದೇತಾನೇ, ಒಬ್ಬ ದಸ್ಯು, ಹಿಂದಿನಿಂದ ಮೇಸನಿನ ತಲೆಗೆ ಹೊಡೆಯಲು ತನ್ನ ದೊಣ್ಣೆಯನ್ನು ಎತ್ತಿದ್ದ. ಆದರೆ, ಎತ್ತಿದ ಕೈ ಬೀಳುವುದರೊಳಗಾಗಿ, ಮಾಂಟಿಗೋ ತನ್ನ ಕತ್ತಿಯಿಂದ ಆ ಎತ್ತಿದ ತೋಳನ್ನು ಕತ್ತರಿಸಿ ಹಾಕಿದ; ಮರುಕ್ಷಣವೇ ಮೇಸನಿನ ಸುತ್ತ ಸ್ವಪಕ್ಷದವರು ಬಳಸಿ ನಿಂತರು.

ಹೀಗೆ ಮಾಂಟಿಗೋವನ್ನು ಹಿಂಬಾಲಿಸಿ ಬಂದವರ ಪೈಕಿ, ನಮ್ಮ ಜಾನ್ ಬಂಪಸೂ ಒಬ್ಬನಾಗಿದ್ದ. ಇವನನ್ನು, ತನ್ನ ಹಡಗಿನಲ್ಲಿ ಕೆಲಸಕ್ಕೆ ಬೇಕೆಂದು, ಕ್ಯಾಪ್ಟನ್ ಮಾಂಟಿಗೋ ಅಧಿಕಾರದ ಒತ್ತಾಯದಿಂದ ಪಡೆದಿದ್ದ. ಮಹಾಕಾಯನಾಗಿದ್ದ ಈ ಬಂಪಸ್, ತನ್ನದೇ ಆದ ಒಂದು ವಿಚಿತ್ರ ಘರ್ಜನೆಯಿಂದ ದಸ್ಯುಗಳ ಮೇಲೆ ನುಗ್ಗಿ, ಒಬ್ಬನನ್ನು ಮುಷ್ಟಿ ಏಟಿನಿಂದ ಉರುಳಿಸಿ, ಇನ್ನೊಬ್ಬನನ್ನು ತನ್ನ ಕತ್ತಿಯಿಂದ ಕತ್ತರಿಸಿ ಹಾಕಿದ.

ಇದೇ ಸಮಯದಲ್ಲಿ, ಮಿಶನರಿಯ ಮನೆಯ ಮೇಲ್ಛಾವಣಿಯಿಂದಲೂ, ಕಿಟಕಿಗಳಿಂದಲೂ, ದೊಡ್ಡದಾಗಿ-ಸುರುಳಿ ಸುರುಳಿಯಾಗಿ ಹೊಗೆ ಹೊರಟಿತು. ಅದನ್ನು ಕಂಡೊಡನೆಯೇ, ಮರುಕಳಿಸಿದ ಭೀತಿಯಿಂದ ಮೇಸನ್, ಪುನಃ ನುಗ್ಗಿ ತೂರಿಹೋಗಲು ಪ್ರಯತ್ನ ಪಟ್ಟ. ಆದರೆ ಈ ವೇಳೆಗೆ ಶತ್ರುಗಳ ಸಂಖ್ಯೆ ಹೆಚ್ಚಾಗಿ—ಇವನಿಗೂ-ಇವನ ಜೊತೆ ಇದ್ದ ನಾವಿಕರಿಗೂ, ಮುಂದೆ ಹೆಜ್ಜೆ ಇಡುವುದೇ ಕಷ್ಟವಾಯಿತು. ಇವರು, ಬಹಳ ಪ್ರಯಾಸದಿಂದಲೂ, ಸಾಹಸದಿಂದಲೂ ಶತ್ರುಗಳನ್ನು ತಡೆಗಟ್ಟಡಲು ಮಾತ್ರ ಸಾಧ್ಯವಾಗಿತ್ತು.

ಕದನದ ಪರಿಣಾಮ ಇನ್ನೂ ಅನಿಶ್ಚಿತವಾಗಿದ್ದ ಈ ಸಮಯದಲ್ಲಿ, ದಸ್ಯುಗಳ ಕಡೆ ಇನ್ನೂ ಅನೇಕ ಜನ ಬಂದು ಸೇರಿಕೊಂಡು, ಅವರ ಬಲವೂ ಧೈರ್ಯವೂ ಹೆಚ್ಚಾಯಿತು. ಈಗ ಅವರು, ಹಠಾತ್ತನೆ ನುಗ್ಗಿ, ಬಿಳಿಯರ ಗುಂಪನ್ನು ಒತ್ತಿ ಹಿಮ್ಮೆಟ್ಟಿಸಿದರು. ಈ ನೂಕುನುಗ್ಗಲಲ್ಲಿ ಮಿಶನರಿ ಕೆಳಗೆ ಬಿದ್ದು, ಸ್ವಲ್ಪಹೊತ್ತು ಜ್ಞಾನವಿಲ್ಲದೆ ಇದ್ದ.

ಇದೇ ಸಮಯದಲ್ಲಿ, ಕದನಕ್ಷೇತ್ರದ ಇನ್ನೊಂದು ಭಾಗದಲ್ಲಿ, ಪಾಳೆಯದ ಹಲವು ಬಿಳಿಯರ ಮತ್ತು ಬಹು ಮಂದಿ ಕರಿಯರ ಪಡೆಯೊಡನೆ, ಓಲ್ ಥಾರ್‌ವಲ್ಡ್-ಚರ್ಚಿಗೆ ಒಯ್ಯುವ ಮುಖ್ಯ ಮಾರ್ಗವನ್ನು ಹಿಡಿದು ರಕ್ಷಿಸುತ್ತ—ತನ್ನ ಪಡೆಗಿಂತಲೂ ಬಹಳ ಹೆಚ್ಚಿನ ಸಂಖ್ಯೆಯಲ್ಲಿದ್ದ ಶತ್ರುದಳವನ್ನು ಇದಿರಿಸಿ ಕಾದಾಡುತ್ತಿದ್ದ. ಈ ದಿನ, ನಾರ್ವೆಯ ಸಮುದ್ರಪತಿಗಳ ವಂಶೀಯ, ತನ್ನ ರಣಶೂರ ಹಿರಿಯರ ಕೀರ್ತಿಯನ್ನು, ಬಹು ಧೀರವಾಗಿ ಎತ್ತಿ ಹಿಡಿದು ಹೋರಾಡಿದ.

ಕದನ ಕ್ಷೇತ್ರದ ಇನ್ನೂ ಸ್ವಲ್ಪ ದೂರವಾದ ಸ್ಥಳದಲ್ಲಿ-ಒಂದು ಚಿಕ್ಕ ತೊರೆ ಹರಿಯುತ್ತಿತ್ತು. ಅದಕ್ಕೆ ಅಡ್ಡವಾಗಿ ಒಂದು ಸೇತುವೆ ಇತ್ತು. ಆ ಸೇತುವೆಯಿಂದ ಐವತ್ತು ಹೆಜ್ಜೆ ದೂರದಲ್ಲಿ, ತೊರೆಯ ತೀರದಮೇಲೆ, ಹೆಚ್ಚುಕಡಿಮೆ, ಗ್ಯಾಸ್ಕೋಯಿನ್ ಮತ್ತು ಹೆನ್ರಿ ಸ್ಟೂಯರ್ಟ್ ಇಬ್ಬರೇ, ಸುಮಾರು ಮೂವತ್ತು ಮಂದಿ ದಸ್ಯುಗಳೊಡನೆ ಹೋರಾಡುತ್ತಿದ್ದರು. ಕದನದ ಪ್ರಾರಂಭದಲ್ಲೇ ಇವರಿಬ್ಬರೂ ಬಲು ರಭಸದಿಂದಲೂ ಆವೇಶದಿಂದಲೂ ಮುನ್ನುಗ್ಗಿದ್ದರಿಂದ, ತಮ್ಮ ಕಡೆಯವರಿಂದ ಬೇರೆಯಾಗಿ—ಕೇವಲ ನಾಲ್ಕು ಮಂದಿ ಸ್ಥಳಿಗ ಕ್ರಿಶ್ಚಿಯನರೊಡನೆ, ಶತ್ರುಗಳಿಂದ ಸುತ್ತುವರಿಯಲ್ಪಟ್ಟಿದ್ದರು. ಹೆನ್ರಿ ಕೈಯಲ್ಲಿ ಒಂದು ತೂಕವಾದ,ಎರಡು ಕಡೆಯೂ ಹರಿತವಾದ ಕತ್ತಿಯಿತ್ತು ಇದು, ಸ್ಕಾಟ್ಲೆಂಡಿನ ಅವನ ಪೂರ್ವಿಕರು ಯುದ್ಧದಲ್ಲಿ ಉಪಯೋಗಿಸಿದ್ದ ಆಯುಧ. ಈ ಧಾಳಿಯನ್ನು ನಿರೀಕ್ಷಿಸದೆ ಇದ್ದ ಗ್ಯಾಸ್ಕೋಯಿನ್, ಕೇವಲ ಒಂದು ಉದ್ದವಾದ ಚಾಕುವಿನೊಡನೆ ಪಾಳೆಯಕ್ಕೆ ಹಿಂತಿರುಗಿದ್ದ. ಆದ್ದರಿಂದ ಅವನು, ಸಮಯಕ್ಕೆ ಕೈಗೆ ಸಿಕ್ಕ, ಒಂದು ದೊಡ್ಡ ಕಬ್ಬಿಣದ ಮುಮ್ಮಟಿಯನ್ನೇ ಎತ್ತಿಕೊಂಡು ಆಯುಧವಾಗಿ ಉಪಯೋಗಿಸುತ್ತ - ಎದುರಿಗೆ ಸಿಕ್ಕಿದವರನ್ನೆಲ್ಲಾ ಸದೆಬಡಿಯುತ್ತ ಹೊರಟಿದ್ದ.

ಇವರಿಬ್ಬರೂ ಒಂದೇ ಕಡೆ ಕಲೆತದ್ದು ಉದ್ದೇಶಪೂರ್ವಕವಾಗಿ ರದೆ ಇದ್ದರೂ,-ಒಂದೇ ಅಪಾಯದ ಕೇಂದ್ರವನ್ನು ಆರಿಸಿಕೊಂಡು ನುಗ್ಗಿ, ಒಂದೇ ಸಮನವಾದ ಉದ್ರೇಕಾತಿಶಯದಿಂದ ಕೈಮಾಡತೊಡಗಿದ್ದರು. ಬಲವಾದ ಇವರ ತೋಳುಗಳಿಂದ, ಮಿಂಚಿನ ವೇಗದಲ್ಲಿ ಸಿಡಿಲಿನಂತೆ ಬೀಳುತ್ತಿದ್ದ ಏಟುಗಳ ಮುಂದೆ, ಬಹು ಸಂಖ್ಯಾತರಾಗಿದ್ದರೂ, ಆ ದಸ್ಯುಗಳು ನಡುಗಿ ಕುಗ್ಗತೊಡಗಿದರು.

ಈ ಮಧ್ಯೆ, ಗಾಯಗೊಂಡಿದ್ದ ಕಿಯೋನ–ಬಲಗೈಯಷ್ಟೇ ಚುರುಕಾಗಿದ್ದ ತನ್ನ ಎಡಗೈಯಿಂದ ಸಾಧ್ಯವಾದ ಮಟ್ಟಿಗೆ ಕದನದಲ್ಲಿ ಭಾಗಿಯಾಗಿದ್ದವನು –ತೊರೆಯ ತೀರದ ಮೇಲೆ ಕಾದಾಡುತ್ತಿದ್ದ ಈ ಗುಂಪನ್ನು ನೋಡಿದ. ಅವನು, ಒಂದು ಗುಂಪಿನೊಡನೆ ಸೇತುವೆಯನ್ನು ಸಾಹಸದಿಂದ ದಾಟಿ, ತನ್ನ ಶತ್ರುಗಳಲ್ಲೆಲ್ಲಾ ಭಾರಿ ಶತ್ರುಗಳೆಂದು ತಾನು ಭಾವಿಸಿದ್ದ ಈ ಇಬ್ಬರನ್ನು ಕಂಡ ಕೂಡಲೆ, ತನ್ನ ವಶರಾದರೆಂದು ಬಗೆದು — ಸಂತೋಷಾತಿಶಯದಿಂದ ವಿಕಟವಾಗಿ ಕೂಗುತ್ತ ನುಗ್ಗಿ, ತನ್ನ ಕೈಲಿದ್ದ ಈಟಿಯನ್ನು ಗುರಿಹಿಡಿದು, ರಭಸದಿಂದ ಹೆನ್ರಿಯ ಮೇಲೆ ಎಸೆದ. ಆದರೆ, ಇವನ ಕೂಗನ್ನು ಕೇಳಿ ಆಗಲೇ ತಿರುಗಿದ್ದ ಗ್ಯಾಸ್ಕೋಯಿನ್ - ಹೆನ್ರಿಯ ಎದೆಗೆ ನೇರವಾಗಿ ಬರುತ್ತಿದ್ದ ಈಟಿಯನ್ನು ಕಂಡು, ತತ್‌ಕ್ಷಣ ತನ್ನ ಕೈಲಿದ್ದ ಕಬ್ಬಿಣದ ಮುಷ್ಟಿಯನ್ನು ಅಡ್ಡವಾಗಿ ಹಿಡಿದ. ಈಟಿ ಅದಕ್ಕೆ ತಾಗಿ, ಏನೂ ಅಪಾಯ ಮಾಡದೆ ಕೆಳಕ್ಕೆ ಬಿತ್ತು.

ಈ ಮಧ್ಯೆ, ಒಲ್‌ಥಾರ್‌ವಲ್ಡ್, ತಾನು ಮೊದಲು ಎದುರಿಸಿದ್ದ ಗುಂಪನ್ನು ಚದುರಿಸಿ, ಈಗ ಸೇತುವೆಯ ಕಡೆ ದೌಡಾಯಿಸಿ ಬರುತ್ತಿದ್ದ. ತನ್ನ ಕೈಲಿದ್ದ ದೊಡ್ಡ ಕತ್ತಿಯನ್ನು ಎತ್ತಿ ತಿರುಗಿಸುತ್ತ, "ಹೊ! ಹೋ ! ವಿಜಯ !—ವಿಜಯ !!" ಎಂದು ಕೂಗುತ್ತಿದ್ದ ಅವನ ಧ್ವನಿ, ಕಹಳೆಯಂತೆ ಕೇಳಿಸುತ್ತಿತ್ತು.

ಗ್ಯಾಸ್ಕೋಯಿನನ್ನು ಕಂಡ ಕೂಡಲೇ " ಹಾ ! ಇಲ್ಲಿ ಬಹಳ ಕೆಲಸ ಇರೋ ಹಾಗಿದೆ! ಥಾರ್‌ವಲ್ಡ್ ಬಂದ ಸಹಾಯಕ್ಕೆ ! ಹುರ್ರಾ!" ಎಂದು ಕೂಗಿ ಹೇಳಿದ.

ಇನ್ನೊಂದು ಕ್ಷಣದಲ್ಲಿ ದಸ್ಯುಗಳೆಲ್ಲ, ಚೆಲ್ಲಾಪಿಲ್ಲಿಯಾಗಿ, ಸೇತುವೆಯನ್ನು ದಾಟಿ ದೌಡಾಯಿಸತೊಡಗಿದರು. ಅವರ ಹಿಂದೆಯೇ, ಗ್ಯಾಸ್ಕೋಯಿನ್ ಮತ್ತು ಹೆನ್ರಿ ಬಿಡದೆ ಬೆನ್ನಟ್ಟಿದರು. ಇವರಿಗೆ ಸ್ವಲ್ಪ ದೂರವಾಗಿ—ಸ್ವಲ್ಪ ದಪ್ಪನಾಗಿದ್ದ ವರ್ತಕ —ವಿಜಯಿಗಳಾಗಿದ್ದ ತನ್ನ ಪಡೆಯವರೊಡನೆ ಏದುತ್ತ ಏದುತ್ತ ಓಡತೊಡಗಿದ.

ಈ ಸಮಯದಲ್ಲೇ, ಅಲ್ಪ ಸಂಖ್ಯೆಯ ನಾವಿಕರು ದಸ್ಯುಗಳ ಧಾಳಿಯನ್ನು ಎದುರಿಸುತ್ತಿದ್ದಾಗ, ಮಿಶನರಿ ಮೇಸನ್ ಕೆಳಗೆ ಬಿದ್ದುದನ್ನು, ಗ್ಯಾಸ್ಕೋಯಿನ್ ಮತ್ತು ಹೆನ್ರಿ ಇಬ್ಬರೂ ನೋಡಿದರು.

"ಹಾ! ಹೋ!—ಹಾ! ಹೋ! ಸಹಾಯಕ್ಕೆ ಥಾರ್‌ವಲ್ಡ್!"

—ಎಂದು, ಗ್ಯಾಸ್ಕೋಯಿನ್ ಕೂಗಿದ. ಅವನ ಸಿಂಹನಾದದಂತಹ ಘರ್ಜನೆ, ಗುಡುಗಿನಂತೆ ಉರುಳುರುಳಿ, ಆ ಪ್ರದೇಶವನ್ನೆಲ್ಲ ತುಂಬಿತು. ಥಾರ್‌ವಲ್ಡ್ ಮತ್ತೊಮ್ಮೆ "ಹುರ್ರಾ!!" ಎಂದು ಕೂಗಿದ.

ಇವರಿಬ್ಬರ ರಣಘೋಷವನ್ನು ಕೇಳಿ ಶತ್ರುಗಳು, ಇದ್ದಕ್ಕಿದ್ದ ಹಾಗೆಯೇ ತಡೆದು ನಿಂತು, ಚದುರಿ ಹೋಗಿದ್ದ ತಮ್ಮ ಪಡೆಯನ್ನು ಕೂಡಿಸತೊಡಗಿದರು. ಕದನ ಈಗ ಒಮ್ಮುಖವಾಗುತ್ತಿತ್ತು. ಕದನ ಕ್ಷೇತ್ರದ ಬೇರೆ ಬೇರೆ ಭಾಗಗಳಲ್ಲಿ ಕಾದಾಡುತ್ತಿದ್ದ ಜನ, ಇಲ್ಲಿಗೆ ಬಂದು, ತಮ್ಮ ತಮ್ಮ ಪಕ್ಷಗಳನ್ನು ಸೇರಿ, ಕಟ್ಟಕಡೆಯ ಹೋರಾಟಕ್ಕೆ ಸಿದ್ಧರಾಗುತ್ತಿದ್ದಂತೆ ತೋರುತ್ತಿತ್ತು. ಪರಸ್ಪರ ಸಮ್ಮತಿಯಿಂದಲೋ ಎಂಬಂತೆ—ಉಭಯ ಪಕ್ಷದವರೂ ಕೆಲವು ನಿಮಿಷಗಳ ಕಾಲ, ತಟಸ್ಥರಾಗಿ—ಒಬ್ಬರನ್ನೊಬ್ಬರು ದುರುಗುಟ್ಟಿ ನೋಡುತ್ತ—ಪುನಃ ಕದನ ಪ್ರಾರಂಭಿಸಲು ಸಮಯ ಕಾಯುತ್ತಿದ್ದರು.

ಈ ಕದನ ನಡೆಯುತ್ತಿದ್ದಾಗ, **ಟೂಲಿಸ್ಮನಿನ** ಜನರು ಸುಮ್ಮನೆ ಇದ್ದರೆಂದು ಭಾವಿಸಬಾರದು. ತೀರದ ಮೇಲೆ ಗಲಭೆಯ ಸೂಚನೆಯನ್ನು ಕಂಡಕೂಡಲೆ—ಹಡಗಿನಿಂದ ಕೆಲವು ದೋಣಿಗಳನ್ನಿಳಿಸಿ—ಅವುಗಳಲ್ಲಿ ಶಸ್ತ್ರಸಜ್ಜಿತರಾದ ಕೆಲವು ಜನ ಕುಳಿತು, ತೀರದ ಕಡೆ ಸಾಧ್ಯವಾದಷ್ಟು ವೇಗದಿಂದ ಹೊರಟರು. ಆದರೆ, ಹಡಗು ತೀರದಿಂದ

ಬಹಳ ದೂರದಲ್ಲಿದ್ದುದರಿಂದಲೂ, ನಾವು ವರ್ಣಿಸಿದ ಘಟನೆಗಳು ಮಿಂಚಿನಂತೆ ನಡೆದು ಹೋದುದರಿಂದಲೂ, ದೋಣಿಗಳು ಅರ್ಧದೂರ ಬರುವುದರಲ್ಲೇ ಕದನ ಹೆಚ್ಚುಕಡಿಮೆ ಮುಕ್ತಾಯವಾಗಿ—ಪಾಳೆಯ ಶತ್ರು ವಶವಾಗುವಂತೆ ತೋರಿತು.

ಈ ವಿಷಯಗಳು, **ಟಾಲಿಸ್ಮನಿನ** ಮೊದಲನೇ ಲೆಫ್ಟಿನೆಂಟ್* ಆಗಿದ್ದ ಮಿ|| ಮುಲ್‌ರಾಯ್-ನ ಗಮನಕ್ಕೆ ಬೀಳದೆ ಇರಲಿಲ್ಲ. ಅವನು ದುರ್ಬೀನು ಮೂಲಕ ತೀರದ ಮೇಲೆ ನಡೆಯುತ್ತಿದ್ದ ಕದನದ ಗತಿಯನ್ನು ಬಹಳ ಕೌತುಕದಿಂದಲೂ—ಕಳವಳದಿಂದಲೂ ನೋಡುತ್ತಿದ್ದ. ದೋಣಿಗಳಲ್ಲಿ ಹೋಗುತ್ತಿದ್ದವರಿಗೆ, ಸಕಾಲದಲ್ಲಿ ತೀರವನ್ನು ತಲುಪಿ ಸಹಾಯ ಮಾಡಲು ಸಾಧ್ಯವಿದ್ದಂತೆ ತೋರಲಿಲ್ಲ. ದಸ್ಯುಗಳ ಹೊಸ ಪಡೆಯೊಂದು, ತಮ್ಮ ಕಡೆಯವರ ಸಹಾಯಕ್ಕಾಗಿ ಧಾವಿಸಿ ಬರುತ್ತಿದ್ದುದು ಅವನಿಗೆ ಗೋಚರವಾಯಿತು. ಅವರ ಬಲವೂ ಸೇರಿದರೆ, ಪಾಳೆಯದವರು ಶತ್ರುಗಳನ್ನು ಎದುರಿಸಿ ಗೆಲ್ಲುವುದು ಕಷ್ಟವಾಗಿ ತೋರಿತು; ಕಷ್ಟವೇನು—ಅಸಾಧ್ಯವಾಗಿಯೇ ತೋರಿತು.

ಈ ಸಮಯಲ್ಲಿ ಅವನು, ಒಂದು ಅತಿ ಧೈರ್ಯವಾದ—ಮತ್ತು ಅಷ್ಟೇ ಅಪಾಯಕರವಾದ ಕೆಲಸಮಾಡಿದ. ಕಡೆಯ ಧಾಳಿಗೆ ದಟ್ಟವಾಗಿ ಒಟ್ಟುಗೂಡಿದ್ದ ದಸ್ಯುದಳ, ಸ್ವಲ್ಪ ಎತ್ತರವಾದ ದಿಣ್ಣೆಯಮೇಲೆ ಇತ್ತು. ಪಾಳೆಯದವರ ಪಡೆ,-ಅವರಿಂದ ಈಚೆಗೆ ತಗ್ಗಿನಲ್ಲಿತ್ತು. ಆದ್ದರಿಂದ, ಶತ್ರುಗಳ ತಲೆಗಳು ಮೇಲೆದ್ದು ಕಾಣುತ್ತಿದ್ದರು. ಕೂಡಲೆ ಆ ಅಧಿಕಾರಿ-ಹಡಗಿನ ಮೇಲಿದ್ದ ಮೂರು ಭಾರಿ ಫಿರಂಗಿಗಳಿಗೆ ಗುಂಡು ಮದ್ದು ತುಂಬಿಸಿ, ತೀರದ ಕಡೆಗೆ ತಿರುಗಿಸಿ, ಸಾಧ್ಯವಾದಷ್ಟು ಎಚ್ಚರಿಕೆಯಿಂದ ಗುರಿ ಇಡಿಸಿದ. ಈ ಕೆಲಸದಿಂದ, ಶತ್ರುಗಳಿಗೆ ಬದಲು ಸ್ವಪಕ್ಷದವರ ಮೇಲೇ ಗುಂಡುಹಾರಿಸುವ ಸಂಭವವಿತ್ತು. ಆದರೆ, ಈಗ ಇದ್ದ ಸನ್ನಿವೇಶದಲ್ಲಿ, ಈ ಅಪಾಯವನ್ನು ತಿಳಿದೂ—ಮುಂದರಿಯುವ ಜವಾಬ್ದಾರಿಯನ್ನು ವಹಿಸುವುದು, ತನ್ನ ಕರ್ತವ್ಯವೆಂದು ಮಿ|| ಮುಲ್‌ರಾಯ್ ಭಾವಿಸಿದ.

---

* Lieutenant ಹಡಗಿನಲ್ಲಿ ಕ್ಯಾಪ್ಟನಿಗೆ ಸಹಾಯಕ ಅಧಿಕಾರಿ.

ಈ ವೇಳೆಗೆ, ಸರ್ವಸಮ್ಮತಿಯಿಂದ ಮಾಂಟಿಗೋ, ಪಾಳೆಯದ ಪಡೆಯ ನಾಯಕತ್ವವನ್ನು ವಹಿಸಿಕೊಂಡಿದ್ದ. ಇವನು ಬೇಗ ಬೇಗ ತನ್ನ ಕಡೆಯವರನ್ನೆಲ್ಲಾ ಸೇರಿಸಿ—ಒಂದು ಕ್ರಮದಲ್ಲಿ ವ್ಯೂಹರಚಿಸಿ-ಶತ್ರುಗಳಮೇಲೆ ಬೀಳಲು ಅಪ್ಪಣೆ ಕೊಡುವುದರಲ್ಲಿದ್ದ ; ಆಗ ಇದ್ದಕ್ಕಿದ್ದ ಹಾಗೆಯೇ, ದಸ್ಯುದಳದವರು, ಮಹಾ ಕೋಲಾಹಲದಿಂದ ಚೀರುತ್ತ-ದಿಣ್ಣೆಯಮೇಲಿನಿಂದ ಧಾವಿಸಿ ಇಳಿಯತೊಡಗಿದರು.

ಹಡಗಿನಮೇಲಿದ್ದ ಮಲ್‌ರಾಯ್‌ಗೆ, ಶತ್ರುಗಳ ಕೂಗು ಕೇಳಿಸದೇ ಇದ್ದರೂ,-ದುರ್ಬೀನಿನ ಮೂಲಕ ಅವರ ಚಲನೆ ಕಾಣಿಸಿತು. ಕೂಡಲೆ ಫಿರಂಗಿ ಗುಂಡುಗಳು ಹಾರಿದವು ದ್ವೀಪದ ಮೇಲೆ ಇದ್ದಕಿದ್ದಂತೆ ಸಿಡಿಲುಗಳೆರಗಿದಂತೆ ಶಬ್ದವಾಗಿ—ಬೆಟ್ಟಗುಡ್ಡಗಳಲ್ಲಿ ಅನುರಣಿತವಾಯಿತು. ದಿಣ್ಣೆಯಿಂದ ಉರುಳಿ ಬರುತ್ತಿದ್ದ ಶತ್ರುಪಡೆಯಮೇಲೆ—ಒಂದರಮೇಲೊಂದರಂತೆ,ಮೂರು ಫಿರಂಗಿಗಳು ಗುಂಡು ಹಾರಿಸಿದುವು. ಕೂಡಲೆ, ಮರಣಕಾರಕವಾದ ಈ ಗುಂಡುಗಳು, -ಶತ್ರುಪಡೆಯನ್ನು ಒಡೆದು, ಸೀಳಿದಂತೆ, ಅದರ ಮಧ್ಯೆ ಮೂರು ಅಗಲವಾದ ಓಣಿಯನ್ನು ಬಿಡಿಸಿದವು.

ಫಿರಂಗಿಗಳ ಭಯೋತ್ಪಾದಕ ಶಬ್ದವನ್ನು ಕೇಳಿ,ತಮ್ಮ ಪಡೆಯಲ್ಲಿ ಅನೇಕ. ಘೋರಹತ್ಯೆಯನ್ನು ನೋಡಿ, ದಸ್ಯುಗಳು ತೀರ ಹೆದರಿ ಹೋದರು. ಅವರ ಶಕ್ತಿಯೆಲ್ಲಾ ಉಡುಗಿ ಹೋಯಿತು ; ಮುಂದೆ ಹೆಜ್ಜೆ ಇಡಲಾರದೆ, ಇದ್ದಲ್ಲೇ ನಿಶ್ಚಲರಾಗಿ ನಿಂತರು.

"ಆಹಾ ! ಬಹಳ ಒಳ್ಳೇ ಕೆಲಸಮಾಡಿದೆ!-ಮಲ್‌ರಾಯ್ !-ನುಗ್ಗಿ !—ಮುನ್ನುಗ್ಗಿ !!—ಮೇಲೆ ಬೀಳೀ !"

—ಎಂದು, ಕೂಗಿದ—ಮಾಂಟಿಗೋ. ಕೂಡಲೆ, ಪಾಳೆಯದ ಬಿಳಿಯರೂ, ಕರಿಯರೂ ಏಕಕಂಠದಿಂದ ಉಚ್ಚಸ್ವರದಲ್ಲಿ-ಜಯಕಾರ ಮಾಡುತ್ತ,ಮಾಂಟಿಗೋ, ಗ್ಯಾಸ್ಕೋಯಿನ್, ಹೆನ್ರಿ ಮತ್ತು ಥಾರ್‌ವಲ್ಡ್—ರ ಮುಂದಾಳುತ್ವದಲ್ಲಿ ದಿಣ್ಣೆಯ ಕಡೆ ನುಗ್ಗಿದರು. ಆದರೆ, ದಸ್ಯುಗಳು ಇವರ ಧಾಳಿಯನ್ನೆದುರಿಸಲು ನಿಲ್ಲಲಿಲ್ಲ. ಪೂರಾ ಭಯಗೊಂಡಿದ್ದ ಅವರು, ಬೆನ್ನು ತೋರಿಸಿ, ಚೆಲ್ಲಾಪಿಲ್ಲಿಯಾಗಿ ಓಡಿದರು.

ಈ ವೇಳೆಗೆ ಮೇಸನ್, ಬಿದ್ದಿದ್ದವನು ಜ್ಞಾನ ತಿಳಿದು ಎದ್ದ. ಕೂಡಲೆ ನಡೆದದ್ದನ್ನೆಲ್ಲ ಜ್ಞಾಪಿಸಿಕೊಂಡು, ತನ್ನ ಮನೆಯ ದಿಕ್ಕಿನಲ್ಲೇ ಶತ್ರುಗಳನ್ನು ಬೆನ್ನಟ್ಟಿ ಹೋಗುತ್ತಿದ್ದ ತನ್ನ ಸ್ನೇಹಿತರ ಹಿಂದೆ ಓಡಿದ. ಅವರು ಬಹಳ ವೇಗವಾಗಿ ಓಡುತ್ತಿದ್ದರೂ -ಆತಂಕಪೂರಿತನಾಗಿದ್ದ ಈ ತಂದೆ—ಅವರಿಗೂ ವೇಗವಾಗಿ ಓಡಿ, ಅವರನ್ನು ತಲುಪಿ—ದಾಟಿ, ಮುಂದಕ್ಕೆ ಹೋದ. ಎದುರಿಗೆ, ಅವನ ಮನೆ, ಒಂದು ತುದಿಯಿಂದ ಇನ್ನೊಂದು ತುದಿಯವರೆಗೆ, ಪೂರ್ತಿ ಹತ್ತಿ ಉರಿಯುತ್ತಿತ್ತು.

ಮೇಸನ್, ಬೆಂಕಿ, ಜ್ವಾಲೆ-ಹೊಗೆಗಳ ಮಧ್ಯೆ ರಭಸದಿಂದ ತೂರಿ ಹೋಗಿ, ತನ್ನ ಮಗಳ ಕೊಠಡಿಯನ್ನು ಪ್ರವೇಶಿಸಿ-ಅವಳ ಹೆಸರು ಹಿಡಿದು ಗಟ್ಟಿಯಾಗಿ ಕೂಗಿದ; ಆದರೆ ಏನೂ ಉತ್ತರ ಬರಲಿಲ್ಲ. ಅವಳ ಹಾಸಿಗೆ ನೋಡಿದ; ಅದು ಬರಿಯದಾಗಿತ್ತು. ನಿರಾಶೆಯಿಂದ ಕೂಗುತ್ತ, ಕಣ್ಣು ಕಾಣಿಸದಂತಾಗಲು-ಕೊಠಡಿಯಲ್ಲೆಲ್ಲ ಸಾಮಾನುಗಳನ್ನು ಎಳೆದಾಡುತ್ತ—ಬಹಳ ಆಸೆಯಿಂದ ತಡಕಾಡಿದ. ಹೀಗೆ ತಡಕುತ್ತಿದ್ದಾಗ,-ಕೆಳಗೆ ಜ್ಞಾನ ತಪ್ಪಿ ಬಿದ್ದಿದ್ದ ಒಂದು ಮನುಷ್ಯಾಕೃತಿಯನ್ನು ಎಡವಿದ. ಕೂಡಲೆ ಅದನ್ನು ಎತ್ತಿಕೊಂಡು, ಉರಿಯುತ್ತಿದ್ದ ಮನೆಯಿಂದ ಹೊರಕ್ಕೆ ಬಂದ. ಈ ವೇಳೆಗೆ ಮನೆಯ ಸುತ್ತ ಹಲವು ಮಂದಿ ಸೇರಿದ್ದರು.

ಸಾವಿನ ದವಡೆಯಿಂದ ಹೀಗೆ ಅವನು ಕಿತ್ತು ತಂದ ವ್ಯಕ್ತಿ, ಬಡಪಾಯಿ ಪ್ರಚಾರಕಾರಿ ಆಗಿದ್ದ. ಇವನು ಅಲೀಸಗಳನ್ನು ರಕ್ಷಿಸಲು ತನ್ನ ಪ್ರಾಣವನ್ನು ಬೇಕಾದರೂ ಬಿಡಲು ಸಿದ್ಧನಾಗಿದ್ದ. ದಸ್ಯುವಿನ ದೊಣ್ಣೆ ಪೆಟ್ಟಿಗೆ ಮೂರ್ಛೆ ಹೋಗಿದ್ದ ಅವನಿಗೆ, ಇನ್ನೂ ಜ್ಞಾನ ಬಂದಿರಲಿಲ್ಲ.

ಮಿಶನರಿ, ತಾನು ಹೊತ್ತು ತಂದ ಕಾರಿಯ ದೇಹವನ್ನು ನೆಲದ ಮೇಲಿಟ್ಟು-ತಿರುಗಿ-ಪುನಃ, ಉರಿಯುತ್ತಿದ್ದ ಮನೆಯೊಳಕ್ಕೆ ನುಗ್ಗುವುದರಲ್ಲಿದ್ದ. ಆದರೆ, ಹೆನ್ರಿ ಸ್ಟ್ಯುಯರ್ಟ್ ಅವನನ್ನು ತಡೆದು ನಿಲ್ಲಿಸಿದ. ಅವನೂ ಓಲ್ ಥಾರ್‌ವಲ್ಡ್-ಇಬ್ಬರೂ ಸೇರಿ, ಅವನು ಉರಿಯುತ್ತಿದ್ದ ಮನೆಯೊಳಕ್ಕೆ ಪುನಃ ಹೋಗದಂತೆ, ಬಲಾತ್ಕಾರದಿಂದ ತಡೆಗಟ್ಟಿದರು.

ಏಕೆಂದರೆ, ಅವನು ಹಾಗೆ ಮಾಡಿದ್ದರೆ, ಬದುಕಿ ಬರುವ ಸಂಭವವೇ ಇರಲಿಲ್ಲ.

ಮಿಶನರಿಯ ತಲೆ, ಎದೆಯ ಮೇಲೆ ಕುಸಿಯಿತು. ಕದನದ ಉದ್ರೇಕವಾಗಲಿ-ಮಗಳ ಪ್ರಾಣದ ಮೇಲಿನ ಆಸೆಯಾಗಲಿ, ಇನ್ನು ಅವನಿಗೆ ಚೇತನ ಕೊಡುವ ಹಾಗಿರಲಿಲ್ಲ. ಅವನು ದೀರ್ಘವಾಗಿ ನರಳುತ್ತ-ಜ್ಞಾನತಪ್ಪಿ-ನೆಲದ ಮೇಲೆ ಬಿದ್ದುಬಿಟ್ಟ.

---

೭

## ಅಪಹೃತಳ ಬಿಡುಗಡೆಗೆ ಒಂದು ಹಂಚಿಕೆ

ಅಲೀಸಳ ಅದೃಷ್ಟದಿಂದ, ಕಿಯೋನ ಅವಳನ್ನು, ಮನೆ ಹತ್ತಿ ಉರಿಯುವ ಮೊದಲೇ ಅಪಹರಿಸಿಕೊಂಡು ಹೋಗಿದ್ದ. ಹೆತ್ತ ಕರುಳಿಗೆ ಇದು ಬಹಳ ಯಾತನೆಯನ್ನು ಕೊಡುವುದೆಂದು ಆ ಧೂರ್ತನಿಗೆ ಚೆನ್ನಾಗಿ ಗೊತ್ತಿತ್ತು!

ದಟ್ಟವಾದ ಕಾಡಿನಿಂದ ಮುಚ್ಚಲ್ಪಟ್ಟ ಕಡಿದಾದ ಬೆಟ್ಟಗುಡ್ಡಗಳ ಮಾರ್ಗದಲ್ಲಿ, ದಸ್ಯುಗಳ ಹಳ್ಳಿಯ ಕಡೆಗೆ, ಕಿಯೋನ, ಹೆದರಿಕೆಯಿಂದ ನಡುಗುತ್ತಿದ್ದ ಕೋಮಲ ಬಾಲೆ—ಅಲೀಸಳನ್ನು ಬೇಗ ಬೇಗ ಹಿಡಿದೊಯ್ಯುತ್ತಿದ್ದ. ಪಾಳೆಯದ ಕರಿಯರ ಒಂದು ಗುಂಪು, ಕಾಡಿನಲ್ಲಿ ಹುಡುಕುತ್ತ, ತಮಗೆ ಸಿಕ್ಕ, ಹುಡುಗಿಯ ಮೋಜ ಒಂದನ್ನು ಪಾಳೆಯಕ್ಕೆ ತಂದಿದ್ದರಿಂದ, ಈ ವಿಷಯ ಗೊತ್ತಾಗಿ, ತಂದೆಯ ಹೃದಯಕ್ಕೆ ಸ್ವಲ್ಪ ನೆಮ್ಮದಿಯಾಯಿತು. ಅದು, ಸುಮಾರು ಒಂದು ಮೈಲಿ ಆಚೆ ಕಾಡಿನಲ್ಲಿ ಅವರ ಕಣ್ಣಿಗೆ ಬಿತ್ತೆಂದೂ, ಪುಟ್ಟ ಹೆಜ್ಜೆ ಗುರುತುಗಳನ್ನೂ, ಅವುಗಳ ಪಕ್ಕದಲ್ಲೇ ಇದ್ದ ದೊಡ್ಡ ದಸ್ಯು ಒಬ್ಬನ ಬೆತ್ತಲೆ ಪಾದದ ಗುರುತುಗಳನ್ನೂ ಹಿಡಿದು, ಬೆಟ್ಟದ ಮಾರ್ಗದಲ್ಲಿ ಬಹುದೂರ ಅವರು ನಡೆದುಹೋದರೆಂದೂ-ಅಲ್ಲಿಂದ ಮುಂದೆ ಗಟ್ಟಿ ನೆಲದಲ್ಲಿ ಗುರುತು ಕಾಣಿಸದಂತಾಯಿತೆಂದೂ-ಆದ್ದರಿಂದ ಅವರು ಹುಡುಕುವುದನ್ನು ಬಿಟ್ಟು ಬಂದರೆಂದೂ—ತಿಳಿಸಿದರು.

ಈ ವೇಳೆಗೆ ಎಚ್ಚರವಾಗಿ ಚೇತರಿಸಿಕೊಂಡಿದ್ದ ಮೇಸನ್,

"ನಾವು ಈ ಕೂಡಲೆ ಅವರ ಬೆನ್ನಟ್ಟಿ ಹೋಗಬೇಕು-ಸ್ವಲ್ಪವೂ ಕಾಲ ವಿಳಂಬವಾಗಕೂಡದು."—ಎಂದ. ಆಗ ಗ್ಯಾಸ್ಕೋಯಿನ್,

"ನನ್ನ ಸಲಹೆ ಏನೆಂದರೆ, ನಮ್ಮ ಪಡೆಯನ್ನು ಮೂರು ಭಾಗ ಮಾಡಬೇಕು. ಒಂದು ಗುಂಪನ್ನು ಥಾರ್‌ವಲ್ಡ್ ಕರೆದುಕೊಂಡು-ಹೋತನ ಕಣಿವೆಯ ಮಾರ್ಗದಲ್ಲಿ ಬಳಸಿ ಹೋಗಬೇಕು. ನಾನು ಅಲ್ಲಿಗೆ ದಾರಿ ತೋರಿಸಿಕೊಡುತ್ತೇನೆ. ಈ ಗುಂಪು, ಅತ್ತಕಡೆ ಸ್ಯಾವೇಜುಗಳು* ಹಿಮ್ಮೆಟ್ಟುತ್ತಿರುವ ಮಾರ್ಗದಲ್ಲಿ ಅಡ್ಡಗಟ್ಟಲಿ; ಇನ್ನೊಂದು ಗುಂಪು, ನಮ್ಮ ಸ್ನೇಹಿತ ಹೆನ್ರಿ ಸ್ಟ್ಯುಯರ್ಟ್-ನ ಜೊತೆಯಲ್ಲಿ-ಅಲೀಸಳನ್ನು ಕರೆದೊಯ್ದಿರುವಂತೆ ತೋರುವ ಮಾರ್ಗದಲ್ಲಿ, ಬೆನ್ನಟ್ಟಿ ಹೋಗಲಿ; ಸಾರ್ವಭೌಮರ ಹಡಗು **ಟಾಲಿಸ್ಮನ್** ಮತ್ತು ಅದರ ನಾವಿಕರು ಮೂರನೆಯ ಗುಂಪಾಗಿ, ಸಮುದ್ರದ ಮೇಲೆ, ಈ ದ್ವೀಪದ ಉತ್ತರ ಭಾಗಕ್ಕೆ ಬಳಸಿ ಹೋಗಿ, ಆ ಸ್ಯಾವೇಜುಗಳ ಹಳ್ಳಿಯ ಮೇಲೆ ಫಿರಂಗಿ ಗುಂಡು ಹಾರಿಸಲಿ."—ಎಂದ. ಥಾರ್‌ವಲ್ಡ್,

"ಹೋತನ ಕಣಿವೆ! ಕಿವಿಗೆ ಒರಟಾಗಿ- ಕಡಿದಾಗಿದೆ ಹೆಸರು! ಅದರಲ್ಲೂ ನನ್ನ ತೂಕದ-ವಯಸ್ಸಿನ ಮನುಷ್ಯನಿಗೆ!"

-ಎಂದು, ಸ್ವಲ್ಪ ಗೊಗ್ಗರು ಧ್ವನಿಯಿಂದ ಹೇಳಿದ.

"ಹೋತನ ಕಣಿವೆ ನೀವು ಯೋಚಿಸೋ ಅಷ್ಟು ಕೆಟ್ಟದಾಗಿಲ್ಲ-ಮಿಸ್ಟರ್ ಥಾರ್‌ವಲ್ಡ್. ನನ್ನ ಸಲಹೆ ಏನೆಂದರೆ, **ಟಾಲಿಸ್ಮನ್** ಅಥವ ಅದರ ಒಂದು ದೋಣಿ, ನಿಮ್ಮನ್ನು ಮತ್ತು ನಿಮ್ಮ ಜನರನ್ನು ಕರೆದುಕೊಂಡು ಹೋಗಿ ಕಣಿವೆಯ ಪಕ್ಕದ ಬೆಟ್ಟದ ಬುಡದಲ್ಲಿ ಬಿಡಬೇಕು. ಅಲ್ಲಿಂದ ನಿಮ್ಮ ಹಾದಿ ಒರಟಾಗಿದ್ದರೂ—ಬಹಳ ಮೋಟಕಾಗುತ್ತದೆ. ಪ್ರಪಾತದ ಮುಖದಮೇಲೆ ಹತ್ತಿ ಹೋಗಬೇಕು—ಅಲ್ಲಿ ಹೋತನಿಗೆ ಭಯವಾಗಬಹುದು—ಆದರೆ, ಸ್ವಲ್ಪ ಎಚ್ಚರಿಕೆಯಿಂದ ಇದ್ದರೆ, ಏನೂ ಭಯವಿಲ್ಲ. ಅಲ್ಲಿಂದ ಆಚೆ—ಕಣಿವೆಗೆ ನಿರಾಯಾಸವಾಗಿ ಇಳಿಯಬಹುದು."

* Savages—ಅನಾಗರಿಕ ಕ್ರೂರಜನರು.

—ಎಂದ. ಗ್ಯಾಸ್ಕೋಯಿನ್. ಮಾಂಟಿಗೋ ಗ್ಯಾಸ್ಕೋಯಿನನ್ನು ಕುರಿತು,

"ಸರಿ, ಆದರೆ ಈ ಸಮಯದಲ್ಲಿ ನಿಮ್ಮ ಕೆಲಸ ಏನು ಎಂದು, ನೀವಿನ್ನೂ ನಮಗೆ ತಿಳಿಸೇ ಇಲ್ಲ''—ಎಂದ.

"ನಾನು ಕ್ಯಾಪ್ಟನ್ ಮಾಂಟಿಗೋ ಜೊತೆಯಲ್ಲಿ ಹೋಗಬೇಕೆಂದಿದ್ದೇನೆ—ಅವರು ಸಮ್ಮತಿಸಿದರೆ"

"ಏನು ?— ನನ್ನ ಜೊತೆ?—ಟಾಲಿಸ್ಮನಿನ ಮೇಲೆ ?"

"ಹೌದು—ಅದೇ ನನ್ನ ಅಭಿಪ್ರಾಯ"

"ಒಳ್ಳೆದು— ಒಳ್ಳೇದು !—ನನ್ನ ಆಕ್ಷೇಪಣೆಯೇನೂ ಇಲ್ಲ-ನಿಜವಾಗಲು ; ಆದರೆ, ನಿಮ್ಮ ಜನರ ಒಂದು ಗುಂಪನ್ನೇ ನೀವು ಕರೆದುಕೊಂಡು ಹೊರಟರೆ, ಹೆಚ್ಚು ಉಪಯೋಗವಾದೀತು—ಎಂದು ನನಗೆ ತೋರುತ್ತದೆ."

"ಅದೂ ಆಗಬಹುದು; ಆದರೆ—ದ್ವೀಪದ ಉತ್ತರ ದಿಕ್ಕಿನಲ್ಲಿ ಹವಳದ ಕಟ್ಟೆಗಳು ಬಹಳ ಅಪಾಯಕರವಾಗಿವೆ; ಆದ್ದರಿಂದ ಅವುಗಳ ವಿಷಯ ಚೆನ್ನಾಗಿ ತಿಳಿದವರೊಬ್ಬರು, ನಿಮ್ಮ ಹಡಗಿಗೆ ಹಾದಿ ತೋರಿಸಿದರೆ ಕ್ಷೇಮ. ಅಲ್ಲದೆ, ನನ್ನ ಮೇಟು ಬಹಳ ನಂಬಿಕೆಯಾದ ಮನುಷ್ಯ ನೀವು ಅಪ್ಪಣೆ ಕೊಟ್ಟರೆ, ನನ್ನ ಹಳೇ ಮೇಟು ಜಾನ್ ಬಂಪಸನ್ನ ಬೆಟ್ಟದ ಮಾರ್ಗವಾಗಿ ಕಳಿಸುತ್ತೇನೆ. ಅವನು ಫೋಮಿಗೆ ಅವಶ್ಯಕವಾದ ತಿಳುವಳಿಕೆಗಳನ್ನೆಲ್ಲ ಕೊಟ್ಟುಬರುತ್ತಾನೆ.''

ಮುಂದೆ ಅರ್ಧ ಗಂಟೆಯೊಳಗಾಗಿ, ಕಾಪ್ಟನ್ ಗ್ಯಾಸ್ಕೋಯಿನಿನ ಯೊಜನೆಗಳೆಲ್ಲ ಕಾರ್ಯರೂಪಕ್ಕೆ ಬರುವಂತಾಯಿತು. ಓಲ್‌ಥಾರ್ವಲ್ಡ್ ಮತ್ತು ಅವನ ಜೊತೆಯವರು, ಟಾಲಿಸ್ಮನ್ ಹಡಗಿನ ಮೇಲೆ ಹತ್ತಿಹೋದರು. ಕೂಡಲೆ ಅದು ಲಂಗರು ಎತ್ತಿ, ಅಪಾಯಕರವಾಗಿದ್ದ ಹವಳದ ಕಟ್ಟೆಗಳ ನಡುವೆ, ಗ್ಯಾಸ್ಕೋಯಿನ್ ತೋರಿಸಿದ ಮಾರ್ಗವಾಗಿ, ಬಹಳ ಎಚ್ಚರಿಕೆಯಿಂದ ದ್ವೀಪದ ಉತ್ತರ ದಿಕ್ಕಿಗೆ ಹೊರಟಿತು. ಹೆನ್ರಿಯೂ ಅವನ ಗುಂಪಿನವರೂ ಅಲೀಸಳ ಹೆಜ್ಜೆ ಗುರುತು ಸೂಚಿಸಿದ ದಿಕ್ಕಿನಲ್ಲಿ, ಕಡಿದಾದ ಬೆಟ್ಟ ಗುಡ್ಡಗಳ ಮಾರ್ಗವಾಗಿ, ಪ್ರಯಾಸ

ದಿಂದ ಮುಂದರಿಯುತ್ತಿದ್ದರು. ಜಾನ್ ಬಂಪಸ್-ಬೇರೊಂದು ದಿಕ್ಕಿನಲ್ಲಿ,ಕಾರಿ ತೋರಿಸಿದ ಹಾದಿ ಹಿಡಿದು ನಡೆಯುತ್ತ, ಬೆಟ್ಟದ ಸಾಲನ್ನು ಹತ್ತಿ ಇಳಿದು-ಫ್ಲೋಮ್ ನಿಂತಿದ್ದ ಕೊಲ್ಲಿಯ ಕಡೆ ಹೋಗುತ್ತಿದ್ದ.

ಬೇರೆ ಬೇರೆ ಗುಂಪಿನವರು ಈ ರೀತಿ ಹೊರಟಾಗ, ಸಾಯಂಕಾಲವಾಗುತ್ತ ಬಂದಿತ್ತು. ಉಜ್ವಲ ಸ್ವರ್ಣಕಾಂತಿಯಿಂದ ಬೆಳಗುತ್ತಿದ್ದ ಸೂರ್ಯ, ಪಶ್ಚಿಮ ದಿಗಂತಕ್ಕೆ ಇಳಿಯುತ್ತಿದ್ದ. ಗಾಳಿ ಬಲು ಹಗುರವಾಗಿ ಬೀಸುತ್ತಿತ್ತು. ಸಮುದ್ರದ ಮೈ ಶಾಂತವಾಗಿತ್ತು. ಕಪ್ಪಾದ ಭಾರಿ ಮೋಡಗಳು ಆಕಾಶದಲ್ಲಿ ಕಾಣಿಸಿಕೊಳ್ಳುತ್ತಿದ್ದವು. ಹವ ಸ್ವಲ್ಪ ಸೆಕೆಯಾಗಿತ್ತು. ಬಿರುಗಾಳಿಯ ಸೂಚನೆ ಕಾಣುತ್ತಿತ್ತು.

---

## ೮

## ಭಕ್ತಳಾದ ಸೇವಕಿ

ಗ್ಯಾಸ್ಕೋಯಿನಿನ ಸ್ಕೂನರು-ಫ್ಲೋಮ್-ನಿಂತಿದ್ದ ಕೊಲ್ಲಿಯನ್ನು-ಸ್ಯಾಂಡೀ ಕೊಲ್ಲಿ ಪಾಳೆಯದಿಂದ ಬೇರ್ಪಡಿಸಿದ್ದ—ಪರ್ವತ ಶ್ರೇಣಿಯ ತುದಿಯನ್ನು,ಕಾರಿ ಮತ್ತು ನಮ್ಮ ಯಾತಕ್ಕೂ ಜಗ್ಗದ ಜೋ ಬಂಪಸ್, ಇಬ್ಬರೂ ಮುಟ್ಟುವ ವೇಳೆಗೆ, ದ್ವೀಪದ ಮೇಲೆ ಕತ್ತಲೆಯ ಮಬ್ಬು ಕವಿಯುತ್ತಿತ್ತು. ಚಟುವಟಿಕೆಯಾದ ಹುಡುಗ, ಸ್ವಲ್ಪ ಮುಂದೆ ಹೋಗುತಿದ್ದವನು, ಒಂದು ಸಲ ತಿರುಗಿ ನೋಡಿದಾಗ, ಬಂಪಸ್ ನೆಲದ ಮೇಲೆ ಏನನ್ನೋ ದಿಟ್ಟಿಸಿ ನೋಡುತ್ತಿದ್ದುದನ್ನು ಕಂಡು, "ಏನದು, ಜೋ?" ಎಂದು ಕೌತುಕದಿಂದ ಕೇಳಿದ.

"ಹೆಜ್ಜೆ!"—ಎಂದ, ಜೋ.

ಹುಡುಗ ಕೂಡಲೇ ಆ ಕಡೆ ಹೆಜ್ಜೆ ಇಟ್ಟು, ನೆಲವನ್ನು ಪರೀಕ್ಷಿಸುತ್ತ,

"ಆಹಾ, ಇದು ಹೆಜ್ಜೆ ಗುರುತೇ!"—ಎಂದ.

ಅಲ್ಲಿ ಒಂದು ಕಡೆ ಬಂಡೆಯಮೇಲೆ, ಸ್ವಲ್ಪ ಮೆದುವಾದ ಮಣ್ಣು ಇತ್ತು. ಈ ಮಣ್ಣಿನ ಮೇಲೆ ಒಂದು ಹೆಜ್ಜೆ ಗುರುತು ಸ್ಫುಟವಾಗಿ ಬಿದ್ದಿತ್ತು. ಕಾರಿ ಇನ್ನೂ ಚೆನ್ನಾಗಿ ಪರೀಕ್ಷಿಸಿ,

"ಇದು ಯಾರದ್ದು ಅಂತೀಯ ಜೋ ?—ಪೂಪೀದು ! ಅವಳ ಕಾಲಿನ ಕಿರಿ ಬೆರಳು ಸ್ವಲ್ಪ ದಪ್ಪ—ಎಲ್ಲಾದರೂ ಅದರ ಗುರುತನ್ನ ಪತ್ತೆ ಮಾಡಬಲ್ಲೆ. ಅವಳು ಇಲ್ಲೀಗೆ ಹೇಗೆ ಬಂದಿದ್ದಳು ?''

"ಶ್ ಶ್ ಶ್ ! ಮಗೂ, ಇಲ್ಲಿ ನೋಡು—ಇಲ್ಲಿ ಇನ್ನೊಂದು ಹೆಜ್ಜೆ ಇದೆ—ಇದು ಅವಳಿಗೆ—ಅವಳ ಹೆಸರೇನು ?—ಹ್ಹಾ ಪಪ್ಪಿ !—ಪಪ್ಪಿಗೆ ಸೇರಿದ್ದಲ್ಲ''—ಎಂದ, ಬಂಪಸ್, ಗೊಗ್ಗರ ಕಂಠದಿಂದ—ಪಿಸು ಮಾತಿನಲ್ಲಿ.

"ಓ !—ಇದು ಅಲೀಸಿಂದು ! ''—ಎಂದು ಪಿಸುಮಾತಿನಲ್ಲೇ ಹೇಳಿದ, ಕಾರಿ. ಅವನ ಮುಖ ಗಂಭೀರವಾಯಿತು. ಅದರಲ್ಲಿ ಕಳವಳವೂ ತೋರಿತು. ಅವನು ಹಾಗೆಯೇ ನೋಡುತ್ತ "ಅಷ್ಟೇ ಅಲ್ಲ ಜೋ; ಅದರ ಪಕ್ಕದಲ್ಲಿ ಸ್ಯಾವೇಜಿನ ಒಂದು ಹೆಜ್ಜೆ ಗುರುತೂ ಇದೆ. ಆಹಾ ! ಅವನು ಮನಸ್ಸು ಬದಲಾಯಿಸಿರಬೇಕು; ಅಥವಾ ತನ್ನ ಬೆನ್ನು ಹತ್ತಿ ಬರುತ್ತಿದ್ದೋರಿಗೆ ಜಾಡು ಸಿಕ್ಕದೇ ಇರಲೀಂತ, ಈ ಕಡೆ ಬಂದಿರಬೇಕು ''—ಎಂದ.

ಕಾರಿಯ ಊಹೆ ನಿಜವಾಗಿತ್ತು. ಪಾಳೆಯದವರು ಭರದಿಂದ ತನ್ನ ಬೆನ್ನು ಹತ್ತಿದ್ದರೆಂದು ತಿಳಿದು, ಕಿಯೋನ, ತನ್ನ ಮಾರ್ಗದಲ್ಲಿ ಮೊದಲು ಸಿಕ್ಕ ಬಂಡೆಯ ನೆಲದ ಅನುಕೂಲವನ್ನು ಪಡೆದು—ಇದ್ದಕ್ಕಿದ್ದ ಹಾಗೆಯೇ, ತಾನು ಇದುವರೆಗೂ ಅನುಸರಿಸಿದ್ದ ಮಾರ್ಗವನ್ನು ಬದಲಾಯಿಸಿ, ಬೇರೆ ಕಡೆ ತಿರುಗಿದ್ದ; ಅಟ್ಟಿ ಬರುತ್ತಿದ್ದವರಿಗೆ ಮತ್ತಷ್ಟು ದಿಗ್ಭ್ರಮೆ ಹುಟ್ಟಿಸಲು — ನಡೆದು ನಡೆದು ಆಯಾಸಗೊಂಡಿದ್ದ ಹುಡುಗಿಯನ್ನು ಅನಾಮತ್ತು ಎತ್ತಿಕೊಂಡು, ತಕ್ಕಷ್ಟು ದೂರ ನಡೆದಿದ್ದ. ಒಂದು ವೇಳೆ ಅಟ್ಟಿ ಬರುತ್ತಿದ್ದರಿಗೆ, ಪುನಃ ತನ್ನ ಹೆಜ್ಜೆ ಗುರುತುಗಳು ಕಂಡರೂ—ಹುಡುಗಿಯ ಹೆಜ್ಜೆ ಗುರುತುಗಳನ್ನು ಕಾಣದೆ—ಅವರು, ತಾವು ತಪ್ಪು ಜಾಡಿನಲ್ಲಿ ಬಂದೆವೆಂದು ಭಾವಿಸಬಹುದು—ಎಂದು ಕಿಯೋನ ಊಹಿಸಿದ್ದ.

ಈ ತಂತ್ರದಲ್ಲಿ ಇಲ್ಲಿಯವರೆಗೆ ಅವನು ಕೃತಾರ್ಥನಾಗಿದ್ದ. ಹೇಗೆಂದರೆ, ನಾವು ಹಿಂದೆ ನೋಡಿದಂತೆ,ಪಾಳೆಯದ ಕರಿಯರು, ಬೇಟೆಯನ್ನು ತೊರೆದು, ಕಿಯೋನನಿಗೆ ಗೊತ್ತಾಗದಂತೆ ಕಳಚಿ ಬಿದ್ದಿದ್ದ, ಅಲೀಸಳ ಒಂದು ಮೋಜಾವನ್ನು ಕಂಡು. ಅದನ್ನು ಎತ್ತಿಕೊಂಡು ಬಂದಿದ್ದರು.

ಆದರೆ, ಇವರಿಗಿಂತ ಬಹಳ ಮುಂದೆ ಬೆನ್ನಟ್ಟಿ ಹೋಗಿದ್ದ ಒಂದು ವ್ಯಕ್ತಿ ಇತ್ತು. ತನ್ನ ಪುಟ್ಟ ಯಜಮಾನಿ ಅಪಹೃತಳಾದಳೆಂದು ತಿಳಿದ ಕೂಡಲೆ ಪೂಪಿ, ತನ್ನ ಶಕ್ತಿಯನ್ನೆಲ್ಲಾ ಬಿಟ್ಟು ಓಡುತ್ತ, ಬೆಟ್ಟದ ಸಾಲಿನಲ್ಲಿ ಒಂದು ಚೆನ್ನಾಗಿ ಗೊತ್ತಾದ ಶಿಖರಕ್ಕೆ ಹತ್ತಿಹೋಗಿದ್ದಳು. ಬಹಳ ಎತ್ತರವಾಗಿದ್ದ ಈ ಸ್ಥಳದಿಂದ, ಬಹುದೂರದವರೆಗೆ, ಕೆಳಗೆ ನಡೆಯುತ್ತಿದ್ದುದೆಲ್ಲ ಇವಳಿಗೆ ಕಾಣಿಸುತ್ತಿತ್ತು. ಕೆಳಗೆ ಕಣಿವೆಯಲ್ಲಿ, ಅಲೀಸಳನ್ನು ಕದ್ದು ಓಡುತ್ತಿದ್ದ ಕಿಯೋನನನ್ನೂ—ಅವನನ್ನು ಬೆನ್ನಟ್ಟಿದ್ದ ಗುಂಪನ್ನೂ ನೋಡಿ ಅವಳಿಗೆ ಹರ್ಷವಾಯಿತು. ಕಿಯೋನ ಮೇಲೆ ತಿಳಿಸಿದ ತಂತ್ರ ಮಾಡಿದ್ದನ್ನೂ ಅವಳು ನೋಡಿದಳು. ಈ ಮೋಸದಿಂದ ಅಟ್ಟಿಬರುತ್ತಿದ್ದವರು ದಿಕ್ಕು ತೋಚದೆ, ಹಿಂತಿರುಗುವರೆಂದು ಅವಳಿಗೆ ಗೊತ್ತಾಯಿತು. ಆದರೆ ಅಷ್ಟು ದೂರದಿಂದ, ಅವರಿಗೆ ಎಚ್ಚರಿಕೆ ಕೊಡುವಂತೆ ಕೂಗುವಷ್ಟು ಶಕ್ತಿ ಅವಳಿಗಿರಲಿಲ್ಲ. ಆದ್ದರಿಂದ ಅವಳು, ಅಲ್ಲಿಂದ ಮುಂದೆ, ತಾನೇ ಬೆನ್ನಟ್ಟುವ ನಿರ್ಧಾರ ಮಾಡಿದಳು.

ಕೂಡಲೆ ಪೂಪಿ, ಒಂದು ಮೊಟಕುದಾರಿಯಲ್ಲಿ ಕಣಿವೆಗೆ ಇಳಿದಳು. ದೈವವಶಾತ್, ಅವಳು ಕಣಿವೆಯಲ್ಲಿ ಒಂದು ಅತಿ ಇಕ್ಕಟ್ಟಾದ ಹಾದಿಯನ್ನು ತಲುಪಿದ್ದಳು. ಅಲೀಸಳನ್ನು ಕದ್ದು ಒಯ್ಯುತ್ತಿದ್ದ ಕಿಯೋನ, ಈ ಹಾದಿಯಲ್ಲೇ ಹೋಗಬೇಕಾಗಿತ್ತು. ಅವರಿಗಿಂತ ಸ್ವಲ್ಪಕಾಲ ಮುಂಚೆ ಇವಳು ಈ ಸ್ಥಳಕ್ಕೆ ಬಂದಿದ್ದದ್ದರಿಂದ—ಇವಳಿಗೆ ಕೆಲವು ನಿಮಿಷಗಳ ವಿಶ್ರಾಂತಿ ದೊರಕಿತು.

ಸ್ವಲ್ಪ ಹೊತ್ತಿನಲ್ಲೇ ಕಿಯೋನ, ಅಲೀಸಳೊಡನೆ ಈ ಮಾರ್ಗವಾಗಿ ಬಂದ. ತನ್ನಂತವೇ, ಕಪ್ಪಾದ, ಹೊಳೆಯುವ—ಆದರೆ, ಅಷ್ಟು ಕ್ರೂರವಲ್ಲದ ಎರಡು ಕಣ್ಣುಗಳು, ಪೊದೆಗಳ ಹಿಂದಿನಿಂದ-ತನ್ನನ್ನೇ

ದಿಟ್ಟಿಸಿ ನೋಡುತ್ತಿದ್ದವೆಂದು, ಈ ತಂತ್ರಿಯಾದ ದಸ್ಯುವಿಗೆ ಗೊತ್ತಾಗ ಲಿಲ್ಲ.

ಕಿಯೋನ ಅಲೀಸಳ ಕೈ ಹಿಡಿದು, ದರದರ ಎಳೆದು ಒಯ್ಯುತ್ತಿದ್ದ. ಆಯಾಸದಿಂದ ಬಳಲಿಹೋಗಿದ್ದ ಬಡಪಾಯಿ ಹುಡುಗಿ, ನಿಲ್ಲುವುದಕ್ಕೇ ತ್ರಾಣವಿಲ್ಲದಿದ್ದರೂ, ಆ ರಾಕ್ಷಸನ ಪಕ್ಕದಲ್ಲಿ ಎಡವುತ್ತ-ಬೀಳುತ್ತ-ಏಳುತ್ತ ಓಡುತ್ತಿದ್ದಳು.

ಅವರು, ಪೂಪಿ ಅವಿತುಕೊಂಡಿದ್ದ ಸ್ಥಳದ ನೇರಕ್ಕೆ ಬಂದಾಗ, ಅಲೀಸಳು ಇನ್ನು ಮುಂದೆ ನಡೆಯಲಾರದೆ, ಕುಗ್ಗಿದ ದನಿಯಲ್ಲಿ ನರಳುತ್ತ ನೆಲಕ್ಕೆ ಕುಸಿದುಬಿಟ್ಟಳು. ಕೂಡಲೆ ಕಿಯೋನ ಹುಡುಗಿ ಯನ್ನು ತನ್ನ ತೋಳುಗಳಲ್ಲಿ ಎತ್ತಿ, ಕೋಪದಿಂದ ಏನೋ ಗೊಣಗುತ್ತ, ಅವಳನ್ನು ಹೆಗಲಮೇಲೆ ಹಾಕಿಕೊಂಡು—ಬೇಗ ಬೇಗ ನಡೆದು ಮುಂದೆ ಹೋದ.

ಬೆಟ್ಟದ ಅತ್ಯುನ್ನತ ಶಿಖರವನ್ನು ತಲುಪಿ, ಕಿಯೋನ ಇದ್ದಕ್ಕಿದ್ದ ಹಾಗೆಯೇ ನಿಂತು, ಅಲ್ಲೇ ಒಂದು ಚಪ್ಪಟೆಯಾದ ಬಂಡೆಯಮೇಲೆ ಅಲೀಸಳ ಸೋತ ದೇಹವನ್ನು ಇಟ್ಟು, ಅಲ್ಲಿಂದ ಸುಮಾರು ಐವತ್ತು ಗಜ ದೂರದಲ್ಲಿದ್ದ ಇನ್ನೊಂದು ಶಿಖರವನ್ನು ಹತ್ತಿ ಹೋದ. ಇಲ್ಲಿ, ಬಹಳ ಹೊತ್ತು ನೆಲದ ಮೇಲೆ ಮಲಗಿ, ನಟ್ಟ ದೃಷ್ಟಿಯಿಂದ-ತಾನು ಇದುವರೆಗೆ ಹಾಯ್ದು ಬಂದಿದ್ದ ಪ್ರದೇಶವನ್ನೆಲ್ಲ ಹುಡುಕುತ್ತ, ನೋಡಿದ. ಬಹುಶಃ ತನ್ನ ಶತ್ರುಗಳ ಚಲನವಲನಗಳೇನಾದರು ಕಂಡೀತೇನೋ—ಎಂದು ಅವನು ಬಗೆದಿದ್ದ.

ಸ್ವಲ್ಪ ಹೊತ್ತಾದ ಮೇಲೆ ದಸ್ಯು ಎದ್ದು, ಹಿಂತಿರುಗಿ ಬಂದು, ಅಲೀಸಳ ಕೈಹಿಡಿದು ಕರೆದುಕೊಂಡು ಹೊರಟ. ಇಬ್ಬರೂ ಬೆಟ್ಟದ ನೆತ್ತಿಯನ್ನು ದಾಟಿ, ಕಡಿದಾದ ಒಂದು ದಾರಿಯಲ್ಲಿ ಹೋಗುತ್ತ, ದ್ವೀಪದ ಆಚೆ ಪಕ್ಕದಲ್ಲಿದ್ದ ಕಣಿವೆಗೆ ಇಳಿಯತೊಡಗಿದರು. ಈ ವೇಳೆಗೆ ಸ್ತಂಜೆಯಾಗುತ್ತ ಬಂದಿತ್ತು. ಗಿಡ ಮರಗಳಿಂದ ಮೊದಲೇ ಕತ್ತಲಾದ ಈ ಕಡಿದಾದ ಮಾರ್ಗ, ಈಗ ಇನ್ನೂ ಕತ್ತಲಾಗಿತ್ತು. ಈ ಸ್ಥಳದಲ್ಲಿ, ಸುಮಾರು ನೂರು ಗಜ ಹೋಗುವುದಕ್ಕೂ ಮೊದಲೆ, ಕಿಯೋನ,

ಹಠಾತ್ತನೆ ಒಂದು ಪಕ್ಕಕ್ಕೆ ತಿರುಗಿ, ಅಲ್ಲಿ ಕಾಣಿಸಿದ ಒಂದು ಗುಹೆಯಲ್ಲಿ ಅಲೀಸಳೊಡನೆ ಪ್ರವೇಶಿಸಿ, ಮರೆಯಾದ.

ಕಿಯೋನನ ಚಲನದಲ್ಲಿ, ಅನಿರೀಕ್ಷಿತವಾದ ಮತ್ತು ಹಠಾತ್ತಾದ ಈ ಬದಲಾವಣೆಯಿಂದ, ಇವರನ್ನೇ ಹಿಂಬಾಲಿಸಿ ಬರುತ್ತಿದ್ದ ಪೂಪಿಗೆ ಬಹಳ ಭಯವಾಗಿ, ದಿಕ್ಕು ತೋಚದ ಹಾಗಾಯಿತು. ಇವಳು, ಗವಿಯ ಬಾಯಿಂದ ಸುಮಾರು ಇಪ್ಪತ್ತು ಗಜಗಳ ದೂರದಲ್ಲಿ, ಬಂಡೆಗಳ ಸಂದಿನಲ್ಲಿ ಅವಿತು, ಪ್ರತಿ ಕ್ಷಣವೂ, ಅವರು ಗವಿಯಿಂದ ಪುನಃ ಹೊರಗೆ ಬರುವುದನ್ನೇ ನಿರೀಕ್ಷಿಸುತ್ತ ಕುಳಿತಳು. ಆದರೆ, ಅವರು ಹಿಂತಿರುಗಲಿಲ್ಲ; ಆಗ, ಇದ್ದಕ್ಕಿದ್ದಹಾಗೆಯೇ ಅವಳಿಗೆ–ಬೆಟ್ಟದ ಆಚೆ ಪಕ್ಕದಲ್ಲಿ, ಗುಹೆಗೆ ಇನ್ನೊಂದು ದ್ವಾರವಿರಬಹುದೆಂದೂ-ತಾನು ಇಲ್ಲಿ ವೃಥಾ ಕಾದು ಕುಳಿತ ಸಮಯದಲ್ಲಿ, ದಸ್ಯುವೂ ತನ್ನ ಒಡತಿಯೂ ಗವಿಯನ್ನು ತೂರಿ ಆಚೆ ಪಕ್ಕದಲ್ಲಿ ಬೆಟ್ಟದಿಂದ ಇಳಿಯುತ್ತ, ತನ್ನ ಕೈಗೆ ಸಿಕ್ಕದ ಹಾಗೆ ಹೋಗುತ್ತಿರಬಹುದೆಂದೂ ಹೊಳೆಯಿತು.

ಈ ಯೋಚನೆ ಬಂದ ಕೂಡಲೆ, ಅವಳು ಹಿಂದು-ಮುಂದು ನೋಡದೆ, ಅವಿತ ಸ್ಥಳದಿಂದ ಈಚೆಗೆ ಬಂದು, ಗವಿಯೊಳಗೆ ಓಡುತ್ತ ನುಗ್ಗಿದಳು. ಆದರೆ, ಅಲ್ಲಿ ಬಹಳ ಕತ್ತಲಾಗಿತ್ತು; ನೆಲ ಬಹಳ ಒರಟಾಗಿತ್ತು. ಇವಳು, ಐವತ್ತು ಗಜ ಓಡುವುದರಲ್ಲೆ, ಕಣ್ಣು ಕಾಣದೆ ಎಡವಿ ಬಿದ್ದುಬಿಟ್ಟಳು. ಬಿದ್ದ ಏಟಿಗೆ ಅವಳ ಮೈ ಜಜ್ಜಿ ಹೋಯಿತು. ಗವಿಯ ಕತ್ತಲೆಯಲ್ಲಿ ಒಬ್ಬೊಂಟಿಗಳಾದ ಆ ಹುಡುಗಿ, ಬಿದ್ದಲ್ಲಿಯೇ ನಿಶ್ಚಲಳಾಗಿದ್ದು, ಸ್ವಲ್ಪ ಕಾಲ ಉಸಿರು ಹಿಡಿದು, ಆಲಿಸಿ ಕೇಳಿದಳು. ಆ ಸನ್ನಿವೇಶದಲ್ಲಿ ಸ್ವಲ್ಪ ಅಸ್ವಾಭಾವಿಕವಾಗಿ, ಗಟ್ಟಿಯಾಗಿ ಕೇಳುತ್ತಿದ್ದ ತನ್ನ ಹೃದಯ ಸ್ಪಂದನ ಶಬ್ದ ಹೊರತು, ಅವಳಿಗೆ ಬೇರಾದ ಸದ್ದೂ ಕೇಳಿಸಲಿಲ್ಲ. ಇದ್ದಕ್ಕಿದ್ದಹಾಗೆಯೇ ಅವಳು ಮಿತಿಮೀರಿದ ಭಯದಿಂದ ಎದ್ದು—ಗವಿಯಿಂದ ಹೊರಕ್ಕೆ ಓಡಿದಳು.

ಈಗ ಪೂಪಿ, ತನ್ನ ಒಡತಿಯಾದ ಅಲೀಸಳು ಕೈತಪ್ಪಿ ಹೋದ್ದರಿಂದು ಬಗೆದು, ದುಃಖವನ್ನು ತಡೆಯಲಾರದೆ, ಗಟ್ಟಿಯಾಗಿ ಅಳತೊಡಗಿದಳು.

ಇದೇ ಸಮಯದಲ್ಲೇ, ಹೆಜ್ಜೆ ಗುರುತುಗಳ ಜಾಡನ್ನು ಹಿಡಿದು, ಬಹಳ ದೂರ ಬಂದಿದ್ದ ಮಾಸ್ಟರ್ ಕಾರಿಯೂ, ಅವನ ಗೆಳೆಯ ಗ್ರ್ಯಾಂಪಸೂ, ಏನೋ ವರ್ಣಿಸಲಾಗದ-ತಾವು ಹಿಂದೆಂದೂ ಕೇಳದಂಥ ಧ್ವನಿಗಳನ್ನು ಕೇಳಿ, ಸ್ತಬ್ಧರಾಗಿ—ಉಸಿರು ಹಿಡಿದು ಆಲಿಸುತ್ತ—ಕೋಪದಿಂದ ಕೂಡಿದ ಆಶ್ಚರ್ಯವನ್ನು ಪ್ರಕಟಿಸುತ್ತ—ಒಬ್ಬರ ಮುಖ ಒಬ್ಬರು ನೋಡುತ್ತ ನಿಂತುಬಿಟ್ಟರು.

---

೯

## ಒಂದು ಕಾಳಗ—ಒಂದು ಮುಳುಗು

ಈಗ ಪೂಪಿ, ಗಟ್ಟಿಯಾಗಿ ರೋದಿಸುತ್ತ—ಹಿಂತಿರುಗಿ ಬರುತ್ತಿದ್ದಳು.

ಜೋ ಮತ್ತು ಕಾರಿ, ಇವಳ ಹೆಜ್ಜೆ ಗುರುತುಗಳನ್ನೇ ಹಿಡಿದು ಮುಂದುವರಿಯುತ್ತ ಬಂದಿದ್ದುದರಿಂದ—ಈಗ, ಹೋದ ದಾರಿಯಲ್ಲೇ ಹಿಂತಿರುಗುತ್ತಿದ್ದ ಪೂಪಿ—ಹೆಜ್ಜೆಹೆಜ್ಜೆಗೂ, ಭಯಚಕಿತರಾಗಿದ್ದ ಇವರನ್ನು ಸಮೀಪಿಸುತ್ತಿದ್ದಳು. ಈವೇಳೆಗಾಗಲೇ ಬೆಟ್ಟಕಾಡಿನ ಈ ಪ್ರದೇಶದಲ್ಲಿ ರಾತ್ರಿಯ ಕತ್ತಲು ಕವಿಯುತ್ತ ಬಂದಿತ್ತು. ಆದ್ದರಿಂದ, ಗಿಡ-ಮರ ಪೊದೆ ಮತ್ತು ಕಪ್ಪಾದ ಬಂಡೆಗಳ ಮಧ್ಯೆ ತೂರಿ ಬರುತ್ತಿದ್ದ ಈ ಹುಡುಗಿಯ ಆಕೃತಿ ಮೊದಮೊದಲು ಅಗೋಚರವಾಗಿತ್ತು.

ಪೂಪಿಯ ರೋದನ ಧ್ವನಿ—ದೂರದಿಂದ ತಗ್ಗಾದ ಸ್ವರದಲ್ಲಿ ಕೇಳಿಬಂದಾಗಲೇ, ಬಂಪಸಿನ ಹೃದಯ ವಿಸ್ಮಯದಿಂದಲೂ ಭಯದಿಂದಲೂ ದುಗುಡಗೊಂಡಿತ್ತು. ಅಸಾಧಾರಣವಾದ ಪ್ರಯತ್ನದಿಂದ ಅವನು ಶಾಂತತೆಯನ್ನು ತಾಳಿದ್ದ. ಆದರೆ ಈಗ, ಆ ಭಯೋತ್ಪಾದಕವಾದ ಧ್ವನಿ ಹತ್ತಿರವಾದಂತೆಲ್ಲ, ಅವನ ಮಾತಾಡುವ ಶಕ್ತಿಯೇ ಉಡುಗಿ ಹೋಯಿತು. ಕಾರಿಯ ಮುಖವಂತೂ ಸೀಸದ ಬಣ್ಣಕ್ಕೆ

ತಿರುಗಿತು. ಇಬ್ಬರೂ ಅವರ್ಣನೀಯವಾದ ಭಯದಿಂದ, ನಿಂತಲ್ಲೇ ಬೇರು ಬಿಟ್ಟವರಂತೆ ನಿಂತು ಬಿಟ್ಟರು ಇವರು, ತಾವು ಕೇಳಿದ ಧ್ವನಿಯನ್ನು ಯಾವುದೋ ದೆವ್ವದ ಕೂಗೆಂದು ಭಾವಿಸಿದ್ದರು. ಕರಿಯ ಹುಡುಗಿ ಪೂಪಿ, ಬಿಳಿಯ ಬಟ್ಟೆ ಹಾಕಿಕೊಂಡಿದ್ದಳು. ಈಗ ಅವಳು ದೂರದಲ್ಲಿ ಕಾಣಿಸಿಕೊಂಡಾಗ—ಅವಳ ಕಾಲು-ತೋಳುಗಳು-ತಲೆ ಎಲ್ಲ ಕತ್ತಲಲ್ಲಿ ಕಾಣಿಸದಂತಾಗಿ, ಸ್ವಲ್ಪ ಮಬ್ಬುಮಬ್ಬಾಗಿ—ಬೆಳ್ಳಗೆ—ಅವಳ ಉಡುಪಿನ ಆಕೃತಿ ಮಾತ್ರ ಕಾಣುತ್ತ, ತಲೆ ಕಾಲು ಕೈಗಳಿಲ್ಲದ, ಯಾವುದೋ ಸ್ವಪ್ರಕಾಶವಾದ ವಿಚಿತ್ರ ಪ್ರಾಣಿಯಂತೆ ಇವರಿಗೆ ತೋರಿದಳು. ಈ ಅಮಾನುಷ ಸಶಬ್ದದೃಶ್ಯವನ್ನು ಕಂಡಕೂಡಲೆ ಬಲಿತ ಮನುಷ್ಯ-ಎಳೇ ಹುಡುಗ-ಈ ಇಬ್ಬರ, ಧೈರ್ಯ-ಸಹಿಷ್ಣುತೆಗಳ ಕಟ್ಟಕಡೆಯ ಕಟ್ಟೂ ಏಕಕಾಲದಲ್ಲಿ ಒಡೆದುಹೋಯಿತು. ಒಬ್ಬ ದೊಡ್ಡದಾಗಿ ಘರ್ಜಿಸಿದ; ಇನ್ನೊಬ್ಬ ಚೀರಿದ. ಇಬ್ಬರೂ "ದೆವ್ವ"ದ ಕಡೆ ಬೆನ್ನುಮಾಡಿ-ಬಯಲು ಮೇಲಿನ ಬಿರುಗಾಳಿಯಂತೆ-ಬೀಳುವುದು ಏಳುವುದನ್ನೂ ಲಕ್ಷಿಸದೆ ದೌಡಾಯಿಸತೊಡಗಿದರು!

ಪೂಪಿಯಿಂದ ಇವರ ಓಟಕ್ಕೆ ಮತ್ತಷ್ಟು ಶಕ್ತಿ ಕೂಡಿತು. ಅವಳು ಮೊದಲು ಇವರನ್ನು ಕಂಡು, ಭಯದಿಂದ ಕೂಗಿಕೊಂಡಳು; ಅನಂತರ ಬೆಟ್ಟದ ನೆತ್ತಿಯಲ್ಲಿ, ಆಕಾಶದ ಹಿನ್ನಲೆಯ ಮೇಲೆ, ಓಡುತ್ತಿದ್ದ ಇವರ ಆಕೃತಿಗಳಲ್ಲಿ ಕಾರಿಯ ಆಕೃತಿಯನ್ನು ಗುರ್ತಿಸಿ, ಹರ್ಷದಿಂದ ಉಚ್ಚಸ್ವರದಲ್ಲಿ ಕೂಗಿದಳು. ಇವಳ ಕೂಗಿನಿಂದ, ಮುಂದೆ ಓಡುತ್ತಿದ್ದವರ ಕಾಲು ಮತ್ತಷ್ಟು ಚುರುಕಾಯಿತು! ಇವಳೂ, ಶಕ್ತಿಮೀರಿ ಓಡುತ್ತ, ಅವರನ್ನು ಹಿಂಬಾಲಿಸಿದಳು. ಆದರೆ, ಪ್ರಾಣ ಭಯದಿಂದ ಓಡುತ್ತಿದ ಎರಡು ಕಾಡುಬೆಕ್ಕುಗಳು, ಬಹುಶಃ ಇವಳ ಕೈಗೆ ಸಿಕ್ಕಿದರೂ ಸಿಕ್ಕಬಹುದಾಗಿತ್ತೇ ಹೊರತು, ಇವರಂತೂ ಸಿಕ್ಕುವಂತಿರಲಿಲ್ಲ!

ಈ ಸಂದರ್ಭದಲ್ಲಿ-ಕ್ಷಣಕಾಲ ಪೂಪಿಗೆ, ಏನು ಮಾಡಬೇಕೋ ತೋಚಲಿಲ್ಲ. ತನಗೆ ಇದ್ದ, ಸ್ಥಳದ ಅಲ್ಪಸ್ವಲ್ಪ ಪರಿಚಯದಿಂದ-ಈಗ, ಪುನಃ ಮೊದಲಿನಂತೆಯೇ — ಅಡ್ಡದಾರಿಯೊಂದರಲ್ಲಿ ಓಡಿ ಹೋಗಿ— ಭಯಗ್ರಸ್ತರಾಗಿ ಓಡುತ್ತಿದ್ದವರಿಗಿಂತಲೂ ಮುಂದಾಗಿ,

ಅವರ ಹಾದಿಯಲ್ಲಿ ಒಂದು ಬಹಳ ಇಕ್ಕಟ್ಟಾದ ಸ್ಥಳವನ್ನು ಸೇರಿ, ಅಡ್ಡಗಟ್ಟುವ ಯೋಚನೆ ಮಾಡಿದಳು. ಇಲ್ಲಿ, ತನ್ನ ಸ್ವಭಾವವಾದ ಧ್ವನಿಯಲ್ಲಿ ಕೂಗಿ ಕರೆಯುವುದಕ್ಕಿಂತ, ತನ್ನ ಶಕ್ತಿಯನ್ನೆಲ್ಲಾ ಬಿಟ್ಟು ಉಚ್ಚಸ್ವರದಲ್ಲಿ ಬೊಬ್ಬೆ ಹಾಕಿದರೆ, ಭಯಗೊಂಡು ಓಡುತ್ತಿದ್ದ ತನ್ನ ಸ್ನೇಹಿತರಿಗೆ ತನ್ನ ಗುರುತು ಸಿಕ್ಕುವುದೆಂದು ಭಾವಿಸಿದಳು. ಅದರಂತೆ–ಅವರಿಬ್ಬರೂ, ಒಂದು ತಿರುವಿನಲ್ಲಿ ಚಾಚಿಕೊಂಡಿದ್ದ ಬಂಡೆಯನ್ನು ಬಳಸಿ, ಧಾವಿಸಿ ಬರುತ್ತಿದ್ದಾಗ, ಇವಳು ಹಠಾತ್ತನೆ, ಹಾದಿಯ ಮಧ್ಯಕ್ಕೆ ಬಂದು ನಿಂತು, ಅನೇಕ ಸಲ, ಮೇಲಿಂದ ಮೇಲೆ, ವರ್ಣಿಸುವುದಕ್ಕೇ ಆಗದ ರೀತಿಯಲ್ಲಿ ಬೊಬ್ಬೆಯಿಟ್ಟು ಕೂಗಿದಳು. ಇದರ ಫಲಿತಾಂಶ—ಕಾರಿ, ಬಂಪಸ್ ಇಬ್ಬರೂ, ಮರುಕಳಿಸಿದ ಭಯದಿಂದ, ಕೆಟ್ಟದಾಗಿ ಒಂದು ಕೂಗು ಹಾಕಿ—ಸರ್ರನೆ ತಿರುಗಿ—ಹಿಂದಕ್ಕೆ ಓಡತೊಡಗಿದರು.!

ಮೊಂಡುಹಿಡಿದು ಬೆನ್ನುಹತ್ತಿದ್ದ ಈ "ದೆವ್ವ"ದಿಂದ ಕಡೆಗೂ ಇವರು ತಪ್ಪಿಸಿಕೊಂಡು ಹೋಗುತ್ತಿದ್ದರು; ಬಡಪಾಯಿಯಾದ ಪೂಪಿ, ಸ್ಯಾಂಡಿಕೊಲ್ಲಿ ಪಾಳಯಕ್ಕೆ ಒಬ್ಬಳೇ ಹಿಂತಿರುಗಬೇಕಾಗಿತ್ತು; ಇದರಲ್ಲಿ ಅನುಮಾನವೇ ಇರಲಿಲ್ಲ. ಆದರೆ ಹಾಗೆ ಆಗಲಿಲ್ಲ. ದೈವವಶಾತ್, ಮುಂದೆ ಓಡುತ್ತಿದ್ದ ಕಾರಿ ಎಡವಿ ಬಿದ್ದ; ಒಂದೆರಡು ಹೆಜ್ಜೆ ಅವನ ಹಿಂದೆಯೇ ಓಡುತ್ತಿದ್ದ ಬಂಪಸ್, ಅವವನ್ನು ಎಡವಿ ಬಿದ್ದ.

"ದೆವ್ವ" ಈ ಅವಕಾಶದಲ್ಲಿ—ಅವರ ಕಡೆಗೆ ಓಡುತ್ತ,

"ಕಾರೀ! ಕಾರೀ ! ಕಾರೀ !! ನಾನು—ಕಾರೀ ! ಇನ್ಯಾರೂ ಅಲ್ಲ—ನಾನು ! ನಾನು!" —ಎಂದು, ಶಕ್ತಿಬಿಟ್ಟು ಕೂಗಿ ಹೇಳಿದಳು.

"ಹಹ್! ಜ್-ಜ್-ಜೋ ! ನನ್ನ ಹೆಸರು ಗೊತ್ತಿರೋ ಹಾಗಿದೆ ಅದಕ್ಕೆ!....ಹ್ಹಾ! ಸ್ವಲ್ಪ ತಾಳು!-ನನಗೆ ಗೊತ್ತು! ಹೌದು !-ಉಹುಂ-ಅಲ್ಲ–ಇರಲಾರದು !–ಹೌದು! ಹೌದು!–ಅದು ಪೂಪಿ! "

—ಎಂದು ಹರಕು, ಮುರುಕಾಗಿ ಮಾತಾಡಿದ ಕಾರಿ. ನಾವಿಕ ಸ್ವಲ್ಪ ಕಳವಳದಿಂದ,

"ಏನು–ಪೂಪಿ ?"–ಎಂದು ಕೇಳಿದ.

"ಏನು?–ನಿನಗೆ ಗೊತ್ತಿಲ್ವೇ ಪೂಪಿ?–ಅಲೀಸಳ ಕೆಲಸದ ಹುಡುಗಿ –ಕಪ್ಪಿ? ಹಾ ! ಹುರೇ–ಹುರೇ !! ಪೂಪೀ ! ನನ್ನ ಮುದ್ದು ಕಪ್ಪೀ ?– ನೀನು ಎಲ್ಲಿಂದ ಬಂದೆ ಪೂಪಿ ಮರೀ !–ನೋಡು–ನಮ್ಮ ಬಂಪಸ್‌ನ ಎಷ್ಟು ಹೆದರಿಸಿ ಬಿಟ್ಟೆ ನೀನು–ಪೂಪಿ !–ನಾನಿಲ್ಲದೆ ಇದ್ದಿದ್ದರೆ–ಇಷ್ಟು ಹೊತ್ತಿಗೆ ಇವನು ಪೂರಾ ಸತ್ತೇಹೋಗ್ತಾ ಇದ್ದ!–ನಿಜವಾಗಲೂ !"

"ಏಯ್, ಕಾರಿ, ಹುಡುಗಿ ಏನು ಹೇಳುತ್ತೆ—ಕೇಳೋಣ; ಅಲೀಸ್ ವಿಚಾರ ಏನಾದರೂ ಸ್ವಲ್ಪ ಅವಳಿಗೆ ಗೊತ್ತಿರಬಹುದು" ಎಂದ, ಬಂಪಸ್.

ಹುಡುಗಿ, ಬೇಗ ಹೇಳುವ ಉತ್ಸಾಹದಿಂದ, ಅವಸರ ಅವಸರ ವಾಗಿ, ಹರಕುಮುರುಕಾಗಿ—ತೊದಲುತ್ತ ತೊದಲುತ್ತ—ಮನಸ್ಸಿನ ಆತಂಕದಿಂದ, ಮಾತುಗಳನ್ನು ಹಿಂದುಮುಂದು ಮಾಡುತ್ತ–ಅನೇಕ ವೇಳೆ ಅರ್ಥವೇ ಆಗದ ರೀತಿಯಲ್ಲಿ ಮಾತನಾಡುತ್ತ–ಕದ್ದು ಓಡುತ್ತಿದ್ದ ದಸ್ಯುವಿನ ವಿಷಯವಾಗಿ ತಾನು ನೋಡಿ ತಿಳಿದುಕೊಂಡಿದ್ದನ್ನೆಲ್ಲ— ಹೇಳಿದಳು.

ಪೂಪಿ ಮಾತು ಮುಗಿಸಿದಮೇಲೆ ಬಂಪಸ್ ಅವಳನ್ನು ಕುರಿತು,

" ಬಾ, ಆ ಗವೀಗೆ ದಾರಿ ತೋರಿಸು ನೋಡೋಣ.''–ಎಂದ.

ಪೂಪಿ ಅವರನ್ನು ಕರೆದು ಕೊಂಡು ಗವಿಯ ಬಳಿಗೆ ಹೋದಳು. ಸ್ವಲ್ಪ ಹೊತ್ತು ಇವರು, ನಿಶ್ಶಬ್ದವಾಗಿ, ಕತ್ತಲಾಗಿದ್ದ ಗವಿಯ ಬಾಯನ್ನೇ ದಿಟ್ಟಿಸಿ ನೋಡುತ್ತ ನಿಂತರು. ಆಗ ಇವರನ್ನೆಲ್ಲಾ ಏನೋ ಒಂದು ತರದ ಭಯ ಆವರಿಸಿತು. ಆ ಕತ್ತಲಾದ ಗುಹೆಯ ಗರ್ಭದಲ್ಲಿ ಇರಬಹುದಾದ—ಬಹುಶಃ ಇದ್ದ—ಅಸಂಖ್ಯಾತ ಭೂತಪಿಶಾಚಿಗಳ ಯೋಚನೆ ಬಂದು, ಕಾರಿಯ ಮೈ ನಡುಗಿತು. ಆದರೆ ಅಲೀಸಳ ಕ್ಷೇಮದ ಯೋಚನೆಯೇ ಹೆಚ್ಚಾಗಿದ್ದದ್ದರಿಂದ, ಭಯ ದೂರವಾಗಿ, ಅವನ ಎದೆ ಉಕ್ಕಿನಂತಾಯಿತು. ಅಲೀಸಳಂಥ ಮುಗ್ಧಳಾದ ಮುದ್ದು ಹುಡುಗಿಯ ಮುಂದೆ, ದೆವ್ವ–ಪಿಶಾಚಿಗಳ ಶಕ್ತಿ ಯಾವುದೋ ರೀತಿ ಯಲ್ಲಿ ಉಡುಗಿ ಹೋಗುವುದೆಂದು ಅವನು ಬಗೆದ. ಆದ್ದರಿಂದ ಸ್ವಲ್ಪ ಸ್ಥೈರ್ಯ ತಂದುಕೊಂಡು,

"ಬಾ ಬಂಪಸ್, ಒಳಗೆ ಹೋಗೋಣ; ಪಂಜುಗಿಂಜು ಹಿಡಿದು ಕೊಂಡು ಹೋದರೆ-ನಾವು ಕಾಣಿಸಿಬಿಡುತ್ತೇವೆ; ಅದ್ದರಿಂದ ಆದೇನೂ ಇಲ್ಲದೇ ಇರೋದೇ ಸರಿ. ಅಲ್ಲದೆ, ನಾವು ಬರೋದು ಆ ಸ್ಯಾವೇಜಿಗೆ ಗೊತ್ತಿಲ್ಲದೇ ಇರೋದರಿಂದ-ಅವನು-ಬೆಂಕಿ-ದೀಪ-ಏನಾದರೂ ಹಚ್ಚ ಬಹುದು ; ಅದರಿಂದ ನಮಗೆ ದಾರಿ ಕಾಣಬಹುದು."—ಎಂದ.

ಬಂಪಸ್, ಬಹಳ ಎಚ್ಚರಿಕೆಯಿಂದ ಹೆಜ್ಜೆ ಇಡುತ್ತ, ತುದಿಗಾಲಿನ ಮೇಲೆ ಗವಿಯೊಳಕ್ಕೆ ಪ್ರವೇಶಿಸಿದ. ಅವನ ಕೈಗಳು, ಜೋಬಿನಲ್ಲಿರುತ್ತ ನಿರಪಾಯವಾಗಿ ಕಾಣುತ್ತಿದ್ದರೂ, ದೆವ್ವಗಳೇನಾದರೂ ಕಾಣಿಸಿಕೊಂಡರೆ, ಹಠಾತ್ತನೆ ಮೇಲೆ ಬೀಳಲು ಸಿದ್ಧವಾಗಿ, ಒಳಗೇ ಮುಷ್ಟಿಗಟ್ಟಿದ್ದವು. ಕಾರಿಯೂ ಮೆಟ್ಟಂಗಾಲ ಮೇಲೆ ಅವನ ಹಿಂದೆಯೇ ಹೋದ. ಪೂಪಿಯೂ ಅವರನ್ನೇ ಅನುಸರಿಸಿ, ತುದಿಗಾಲ ಮೇಲೆ, ಕಾರಿ ಷರಾಯಿಯ ಸೊಂಟದ ಪಟ್ಟಿಯನ್ನು ಎರಡು ಕೈಗಳಿಂದಲೂ ಹಿಡಿದು ಕೊಂಡು, ಅವರ ಹಿಂದೆ ಹೊರಟಳು. ಅವಳು ಹೆದರಿಕೆಯಿಂದ ಬಹಳ ನಡುಗುತ್ತಿದ್ದಳು. ತನ್ನ ಪುಟ್ಟ ಅಲೀಸಳ ಮೇಲಿನ ಭಕ್ತಿ-ಪ್ರೀತಿಗಳಿಂದಲೂ-ಅವಳ ಕ್ಷೇಮದ ಕಾತರತೆಯಿಂದಲೂ ಅವಳು ಹೋಗುತ್ತಿದ್ದಳು. ಇಲ್ಲದೇ ಇದ್ದಿದ್ದರೆ, ಆ ಸ್ಥಳದಿಂದ ಪರಾರಿಯಾಗಿ ಬಿಡುತ್ತಿದ್ದಳು.

ಈ ರೀತಿ, ಹೆಜ್ಜೆಹೆಜ್ಜೆಯಾಗಿ, ಈ ಮೂವರೂ, ಹೊರಗಿನ ಮಬ್ಬುಗತ್ತಲೆಯಿಂದ-ಗವಿಯೊಳಗಿನ ಹೆಪ್ಪುಗತ್ತಲೆಯಲ್ಲಿ ನಡೆದು ಹೋದರು. ಸ್ವಲ್ಪ ದೂರ ಹೋಗುವುದರಲ್ಲೇ ಅವರನ್ನು ಕತ್ತಲೆ ನುಂಗಿಬಿಟ್ಟಿತು.

ಇದೇ ಸಮಯದಲ್ಲಿ ಹೆನ್ರಿ ಸ್ಟೂಯರ್ಟನ ಗುಂಪಿನವರಿಂದ ತಪ್ಪಿಸಿಕೊಂಡು ಓಡುತ್ತಿದ್ದ ಒಂದು ದಸ್ಯುಗಳ ಗುಂಪನ್ನು, ನಾವು ಮೇಲೆ ತಿಳಿಸಿದ ಕೂಗಾಟ-ಬೊಬ್ಬೆ ಚೀರಾಟಗಳು ಆಕರ್ಷಿಸಿದವು. ಈ ಘಾತುಕರು, ಧ್ವನಿಯನ್ನೇ ಆಲೈಸುತ್ತ, ಮೆಲ್ಲಗೆ-ಎಚ್ಚರಿಕೆಯಿಂದ ಹತ್ತುತ್ತ, ಜಾನ್ ಬಂಪಸ್, ಕಾರಿ, ಮತ್ತು ಪೂಪಿ ಇವರು ಗವಿಯೊಳಗೆ ಪ್ರವೇಶಿಸಿದ ಕೆಲವು ನಿಮಿಷಗಳ ತರುವಾಯ, ಅದರ ಬಳಿಗೆ ಬಂದರು.

ಇಲ್ಲಿ ಈ ದಸ್ಯುಗಳು, ಗವಿಯ ಮುಂದೆ ಮಾತಾಡುತ್ತ ಕುಳಿತು

ಕೊಂಡರು. ಇಲ್ಲಿ ಹೀಗೆ ನಡೆಯುತ್ತಿದ್ದಾಗ, ಕಿಯೋನ ಅಲೀಸಳನ್ನು ತನ್ನ ಗಾಯವಾಗದ ತೋಳಿನಲ್ಲಿ ಎತ್ತಿಕೊಂಡು-(ಪ್ರೂಪಿ ಊಹಿಸಿದ್ದ ಹಾಗೆ-ಗವಿ, ಬೆಟ್ಟವನ್ನು ತೂರಿಹೋಗಿ, ಅದಕ್ಕೆ ಆಚೆ ಪಕ್ಕದಲ್ಲಿ ಒಂದು ಸಣ್ಣ ಕಂಡಿಯಿತ್ತು) ಗವಿಯ ಮೂಲಕ ಹಾದು, ಬೆಟ್ಟದ ಪಕ್ಕದಲ್ಲಿ ಹೊರಗೆ ಬಂದು, ಅಲ್ಲಿ ಒಂದು ಎತ್ತರವಾದ ಬಂಡೆಯ ಮೇಲೆ ಅಲೀಸಳನ್ನು ಕೂರಿಸಿ ಅವಳನ್ನು ಕುರಿತು,

"ನೋಡು !-ನೀವು ಇಲ್ಲಿಂದ ಅಲ್ಲಾಡು-ಉಹುಂ !-ಗೊತ್ತು? ಓಟ-ಪಾಟ-ಮಾಡಿದರೆ-ನೀನು ಸಾಯುತಿ !"—ಎಂದು ತಗ್ಗುದನಿಯಲ್ಲಿ ಗದರಿಸಿ, ಅವಳನ್ನು ಅಲ್ಲಿ ಬಿಟ್ಟು, ಪುನಃ ಗವಿಯನ್ನು ಪ್ರವೇಶಿಸಿದ. ಇವನನ್ನು ಅಟ್ಟಿಬಂದು-ಗವಿಯ ಮುಂದುಗಡೆಯಿಂದ ಪ್ರವೇಶಿಸಿದ್ದವರು ಇವನ ಕಡೆ ಮುಂದುವರಿಯುತ್ತಿದ್ದಾಗ, ಕಿಯೋನ ತಗ್ಗು ಸ್ವರದಲ್ಲಿ ಕಂಪನಧ್ವನಿ ಮಾಡಿದ. ಅದನ್ನು ಕೇಳಿದ ಮೂರು ವ್ಯಕ್ತಿಗಳ ನಾಡಿಗಳಲ್ಲು ರಕ್ತ ಹೆಪ್ಪುಗಟ್ಟಿತು; ಅವರ ಹೃದಯಗಳು ಚಿಮ್ಮಿ ಎದ್ದು ಕ್ಷಣಕಾಲ ಗಂಟಲಲ್ಲಿ ಒತ್ತಿದಂತಾಗಿ, ಉಸಿರು ಕಟ್ಟಿದ ಹಾಗಾಯಿತು. ಒಂದೆರಡು ಕ್ಷಣ ಬಿಟ್ಟು, ಕಾರಿ, ಭಯದಿಂದ ಉಸಿರೆಳೆಯುತ್ತ, "ಪ್ರೂಪಿ ಪರಾರಿ !" -ಎಂದ. ಇದರಲ್ಲಿ ಅನುಮಾನವಿರಲಿಲ್ಲ. ಕಿಯೋನನ ಕಂಪನಧ್ವನಿ ಕೇಳುತ್ತಿದ್ದ ಹಾಗೆಯೇ ತನ್ನ ಸೊಂಟದ ಪಟ್ಟಿ ಹಿಡಿದು ಕೊಂಡಿದ್ದ ಪ್ರೂಪಿಯ ಕೈಗಳು ಬಿಟ್ಟಿದ್ದು ಅವನಿಗೆ ಗೊತ್ತಾಯಿತು; ಅವಳು ಗವಿಯ ಬಾಯ ಕಡೆ ಓಡುತ್ತಿದ್ದುದೂ ಸ್ಫುಟವಾಗಿ ಕೇಳಿಸಿತು.

ಕಿಯೋನ, ತನ್ನ ಶತ್ರುಗಳು ಇದ್ದ ಸ್ಥಳವನ್ನು ಸರಿಯಾಗಿ ತಿಳಿದುಕೊಳ್ಳುವುದಕ್ಕೋಸ್ಕರ, ಒಂದೆರಡು ನಿಮಿಷ ಕಾದು, ಅನಂತರ ಮೊದಲಿನಂತೆಯೇ ಕಂಪಿತ ಧ್ವನಿಯಲ್ಲಿ ಕೂಗತೊಡಗಿ, ಬರ ಬರುತ್ತ ಪೈಶಾಚಿಕವಾಗಿ ಸ್ವರವನ್ನು ಏರಿಸಿ, ಗವಿಯೆಲ್ಲಾ ತುಂಬಿ ಮಾರ್ದನಿ ಕೊಡುವಂತೆ ಮಾಡಿದ. ಅದೇ ಸಮಯದಲ್ಲಿ, ಸಾಧ್ಯವಾದ ಮಟ್ಟಿಗೆ ಗುರಿಯನ್ನು ಊಹಿಸಿ, ತನ್ನ ಶತ್ರುಗಳು ಎಲ್ಲಿ ಇರಬಹುದೆಂದು ತಾನು ಭಾವಿಸಿದ್ದನೋ ಆ ನೇರಕ್ಕೆ, ತನ್ನ ಈಟಿಯನ್ನು ಎಸೆದು, ಅದರ ಹಿಂದೆಯೇ ಕಲ್ಲುಗಳನ್ನೂ ಎಸೆದ.

ಸ್ವಲ್ಪಮಟ್ಟಿಗೆ ಅಮಾನುಷದಲ್ಲಿ ಮೂಢನಂಬಿಕೆ ಇದ್ದ ನಮ್ಮ ನಾವಿಕ ಶಿಖಾಮಣಿಗೆ, ದಸ್ಯುವಿನ ವಿಕಟ ಧ್ವನಿಯನ್ನು ಕೇಳಿ ಭಯವಾಯಿತು. ಆದರೆ, ದಸ್ಯು ಎಸೆದ ಈಟಿ, ತನ್ನ ಕಿವಿಗೆ ಒಂದು ಅಂಗುಲ ದೂರದಲ್ಲಿ ರೊಯ್ಯನೆ ಹಾದು ಹೋದದ್ದನ್ನು ನೋಡಿ, ಬಂಪಸಿಗೆ ಧೈರ್ಯವುಂಟಾಯಿತು. ದೆವ್ವಗಳು, ಕೂಗಬಹುದು—ಕಾಣಿಸಿಕೊಳ್ಳಬಹುದು-ಮಾಯವಾಗಬಹುದು ; ಆದರೆ ಅವು ಈಟಿಗಳನ್ನಾಗಲಿ—ಕಲ್ಲುಗಳನ್ನಾಗಲಿ ಎಸೆಯಲು ಸಾಧ್ಯವಿಲ್ಲ. ಆದ್ದರಿಂದ, ತಾವು ಹುಡುಕುತ್ತಿದ್ದ ಮನುಷ್ಯ ಹತ್ತಿರದಲ್ಲೇ ಇದ್ದಾನೆ—ಎಂದು ಊಹಿಸಿದ.

ಈ ನಂಬಿಕೆಯ ಮೇಲೆ ಬಂಪಸ್, ಬಹು ಕೃತ್ರಿಮದಿಂದ, ಭಯವನ್ನು ನಟಿಸಿ ಕೂಗಿಕೊಳ್ಳುತ್ತ ಹಿಂತಿರುಗಿ ಓಡಿದ. ಈ ವೇಳೆಗೆ ದೆವ್ವದಲ್ಲಿ ಪೂರ್ಣವಾದ ನಂಬಿಯುಂಟಾಗಿದ್ದ ಕಾರಿ, ನಿಜವಾದ ಭಯದಿಂದ ಚೀರುತ್ತ ಏದುತ್ತ ಬಂಪಸನನ್ನು ಹಿಂಬಾಲಿಸಿದ.

ಆದರೆ ಸುಮಾರು ಐವತ್ತು ಗಜ ಓಡುವ ಮೊದಲೇ, ಜಾನ್ ಬಂಪಸ್ ಹಠಾತ್ತಾಗಿ ನಿಂತು, ಕಾರಿಯ ಕೊರಳಿಗೆ ಕೈಹಾಕಿ—ಅವನನ್ನು ಒಂದು ಬಂಡೆಯ ಹಿಂದಕ್ಕೆ ಎಳೆದುಕೊಂಡು ಹೋದ. ಅಲ್ಲಿ, ವಿವರಣೆಯ ತೊಂದರೆ ಇಲ್ಲದೆ ಅವನ ಕೂಗಾಟವನ್ನು ತಡೆಯುವುದಕ್ಕೆ, ತಕ್ಕ ಮತ್ತು ಶೀಘ್ರವಾದ ಉಪಾಯವೆಂದು ಬಗೆದು, ತನ್ನ ಭಾರಿ ಅಂಗೈಯನ್ನು ಅವನ ಬಾಯಿನ ಮೇಲೆ ಇಟ್ಟು ಒತ್ತಿದ.

ಬಂಪಸ್ ನಿರೀಕ್ಷಿಸಿದಂತೆ, ಮರುಕ್ಷಣದಲ್ಲೇ ದಸ್ಯುವಿನ ಮೆದುವಾದ ಹೆಜ್ಜೆ ಸಪ್ಪಳ ಕೇಳಿಸಿತು. ಅವನು, ಇವರನ್ನು ಹಿಂಬಾಲಿಸುತ್ತ, ಕತ್ತಲಲ್ಲಿ ಇವರು ಅವಿತಿದ್ದುದನ್ನು ಕಾಣದೆ ಹಾಯ್ದು ಮುಂದೆ ಹೋಗುತ್ತಿದ್ದಾಗ, ಅವಿತುಕೊಂಡಿದ್ದ ಬಂಪಸಿಗೆ ಬಹಳ ಸಮೀಪವಾಗಿ ಬಂದ. ಆಗ, ಆಜಾನುಬಾಹು ನಾವಿಕ, ದಸ್ಯುವಿನ ಗಾಯವಾಗಿದ್ದ ತೋಳಿನ ಮೇಲೆ ಬಲವಾಗಿ ಮುಷ್ಟಿಯಿಂದ ಹೊಡೆದ. ಆ ಏಟು ಹಗಲು ಬೆಳಕಿನಲ್ಲಿ ಸರಿಯಾಗಿ ಬಿದ್ದಿದ್ದರೆ ಖಂಡಿತವಾಗಿಯೂ ಕಿಯೋನನ ಭುಜದ ಮೂಳೆ ಪುಡಿಪುಡಿಯಾಗುತ್ತಿತ್ತು. ಆದರೆ, ಈ ಕತ್ತಲಲ್ಲಿ ಬಿದ್ದ ಏಟಿಗೆ, ಕಿಯೋನ ತತ್ತರಿಸಿ—ಬೊಬ್ಬೆಯಿಡುತ್ತ,

ಗವಿಯ ಬಾಯಿನ ಕಡೆಗೆ ಓಡಿದ. ಈಗ ಧೈರ್ಯಗೊಂಡಿದ್ದ ಜೋಗೆ ಅವನು ಸೆರೆ ಸಿಕ್ಕುವನೆಂದು ಭರವಸೆಯಾಯಿತು. ಕೂಡಲೆ ಎದ್ದು ಅವನ ಹಿಂದೆ ಓಡಿದ.

ಆದರೆ, "ಕೈಗೆ ಬಂದದ್ದು ಬಾಯಿಗಿಲ್ಲ" ಎಂಬ ಗಾದೆ ಇದೆ ಯಷ್ಟೆ. ಕಿಯೋನ ಗವಿಯಿಂದ ಹೊರಬಿದ್ದ ಕೂಡಲೆ, ಹೊರಗೆ ಇದ್ದ ದಸ್ಯುಗಳ ಗುಂಪಿನವರು, ಧ್ವನಿಯಿಂದ ಅವನು ತಮ್ಮವನೆಂದು ತಿಳಿದು, ಕೂಗಿ ಅವನನ್ನು ತಮ್ಮ ಬಳಿಗೆ ಕರೆದರು. ಈ ಮೊದಲೆ, ಪೂಪಿ ಗವಿಯಿಂದ ಹೊರಗೆ ಬಂದ ಕೂಡಲೆ—ಕೂಗಿಕೊಳ್ಳುವುದಕ್ಕೂ ಮುಂಚೆ ಇವರು ಅವಳನ್ನು ಹಿಡಿದು, ಬಾಯಿಗೆ ಬಟ್ಟೆ ತುರುಕಿ, ಬಂಧಿಸಿಟ್ಟಿದ್ದರು. ಈಗ ಇವರೆಲ್ಲ, ಈಟಿಗಳನ್ನು ಎತ್ತಿ ಹಿಡಿದು, ಅರ್ಧ ವೃತ್ತಾಕಾರದಲ್ಲಿ ಗವಿಗೆ ಎದುರಾಗಿ ನಿಂತು, ಗವಿಯೊಳಗಿನಿಂದ ಬರ ಬಹುದಾದವರನ್ನೆಲ್ಲಾ ಸೆರೆಹಿಡಿಯಲು—ಅಥವಾ ಕೊಲ್ಲಲು ಸಿದ್ಧರಾಗಿ ದ್ದರು

ಬಂಪಸ್, ಗವಿಯ ಮುಖದಿಂದ, ಸಿಡಿಲಿನಂತೆ ಎರಗಿ ಬಂದ; ಕಾರಿ, ಮಿಂಚಿನ ಎಳೆಯಂತೆ ಬಂದ. ಹೊರಗೆ ಬಂದ ಕೂಡಲೆ ನಾವಿಕ, ಕೋಡುಗಲ್ಲಿನಂತಿದ್ದ ಒಂದು ಬಂಡೆಯ ಮೇಲಕ್ಕೆ ನೆಗೆದು—

"ಹೀಗೆ ಬಾ ಕಾರಿ !"

—ಎಂದು ಕೂಗಿ, ಅನಂತರ ತನ್ನ ಭಾರಿ ಸುತ್ತಿಗೆಯಂಥ ಮುಷ್ಟಿ ಗಳನ್ನೆತ್ತಿ—ದಸ್ಯುಗಳ ಕಡೆ ನೋಡುತ್ತ,

"ಹ್ಞಾ ! ಈಗ ಬನ್ನೀ ! ಕರೀ ಕೋತಿಗಳಾ !—ಎಲ್ಲಾ ಒಟ್ಟಿಗೆ ಬನ್ನಿ—ಬೇಕಾದರೆ! ಜೋ ಬಂಪಸ್ಸಿನ ರುಚಿ ನೋಡಿ ಬನ್ನಿ !"–ಎಂದ.

ದಸ್ಯುಗಳು, ಈ ಉಚಿತವಾದ—ಆಹ್ವಾನವನ್ನು ಸ್ವೀಕರಿಸುವುದ ರಲ್ಲಿ ಸಾವಕಾಶ ಏನೂ ಮಾಡಲಿಲ್ಲ. ಅವನನ್ನೂ ಹುಡುಗನನ್ನೂ ಒಟ್ಟಿಗೆ ಸೆರೆಹಿಡಿಯುವ ಉದ್ದೇಶದಿಂದ, ಅವರೆಲ್ಲ ಗುಂಪಾಗಿ ಮೇಲೆ ನುಗ್ಗಿದರು. ಅವರಲ್ಲಿ ಮುಂದೆ ಇದ್ದ ಇಬ್ಬರನ್ನು ಬಂಪಸ್, ತನ್ನ ಎಡ—ಬಲ ಮುಷ್ಟಿಗಳಿಂದ ಹೊಡೆದ. ಅವರು ಜ್ಞಾನ ತಪ್ಪಿ ಹಿಂದೆ ಇದ್ದವರ ಮೇಲೆ ಬಿದ್ದರು. ಅವರು ಬಿದ್ದ ರಭಸಕ್ಕೆ ಹಿಂದೆ ಇದ್ದ

ಇಬ್ಬರೂ ಉರುಳಿಬಿದ್ದರು. ಬಂಪಸ್ ಇದನ್ನು ನಿರೀಕ್ಷಿಸಿದ್ದ. ಈಗ ದೊರೆತ ಅವಕಾಶದಲ್ಲಿ ಅವನು ಪುನಃ ತನ್ನ ಉಕ್ಕಿನಂಥ ಮುಷ್ಟಿಗಳನ್ನು ಎಡಬಲದಲ್ಲಿ ಪ್ರಯೋಗಿಸುತ್ತ, ಇನ್ನು ಎಂಟು ದಸ್ಯುಗಳನ್ನು ಹೊಡೆದು ಉರುಳಿಸಿದ.

ತಮ್ಮ ಗುಂಪಿನಲ್ಲಿ ಇಷ್ಟು ಮಂದಿ ಏಟು ತಿಂದು ಉರುಳಿದ್ದನ್ನು ಕಂಡು, ಬಂಪಸ್ ಪುನಃ ಹೊಡೆಯಲು ಸಿದ್ಧನಾಗುವುದಕ್ಕೆ ಅವಕಾಶ ಕೊಡದೆ, ಎಲ್ಲರೂ ಒಟ್ಟಾಗಿ ಅವನ ಮೇಲೆ ಬಿದ್ದರು. ಅಂದರೆ, ಎಲ್ಲರಿಗಿಂತಲೂ ಹಿಂದೆ ಇದ್ದವರು ತಮ್ಮ ಮುಂದಿದ್ದವರನ್ನು ತಳ್ಳಿದರು; ಇವರು ತಮ್ಮ ಮುಂದಿದ್ದವರನ್ನು ತಳ್ಳಿದರು; ಹೀಗಾಗಿ ಇಡೀ ಗುಂಪು, ದುರದೃಷ್ಟಶಾಲಿಗಳಾದ ಆ ಇಬ್ಬರ–ಅಂದರೆ, ಜೋ ಬಂಪಸ್ ಮತ್ತು ಕಾರಿಯ ಮೇಲೆ ಒಮ್ಮೆಗೇ ಬಿದ್ದು, ಅವರನ್ನು ಹೆಚ್ಚು ಕಡಿಮೆ ಕಪ್ಪಾದ ನರಮಾಂಸ ರಾಶಿಯಿಂದ ಜೀವ ಸಹಿತ ಹೂತ ಹಾಗೆ ಮಾಡಿಬಿಟ್ಟರು.

ತಮ್ಮ ಮೂರು ಬಂದಿಗಳನ್ನೂ ಭದ್ರವಾಗಿ ಬಂಧಿಸುವುದಕ್ಕೆ ಆ ದಸ್ಯುಗಳಿಗೆ ಸ್ವಲ್ಪ ಕಾಲ ಹಿಡಿಯಿತು. ಅನಂತರ ಅವರನ್ನು ಗುಹೆಯೊಳಕ್ಕೆ ಹೊತ್ತುಕೊಂಡು ಒಯ್ದರು.

ಇಲ್ಲಿ ಒಂದು ಪಂಜು ಹಚ್ಚಿ ಬೆಳಕು ಮಾಡಿಕೊಂಡು, ಈ ಬಂದಿಗಳನ್ನು ಏನುಮಾಡಬೇಕೆಂದು ಬಹಳ ಹೊತ್ತು ಸಮಾಲೋಚನೆ ನಡೆಸಿದರು. ಕಡೆಗೆ, ಇವರನ್ನೆಲ್ಲಾ ತಮ್ಮ ಹಳ್ಳಿಗೆ ಒಯ್ಯತಕ್ಕದ್ದೆಂದೂ, ಅಲ್ಲಿ ತಮ್ಮ ಮುಖಂಡರು ತೀರ್ಮಾನಿಸಿದ ಪ್ರಕಾರ ಬಂಧಿತರನ್ನು ವಿಲೇವಾರಿ ಮಾಡತಕ್ಕದ್ದೆಂದೂ ತೀರ್ಮಾನಿಸಿ, ಇವರನ್ನು ಹೊತ್ತುಕೊಂಡು ತಮ್ಮ ಹಳ್ಳಿಯ ಕಡೆ ಹೊರಟರು. ಹೋಗುತ್ತ ಮಾರ್ಗದಲ್ಲಿ ಆಲೀಸಳನ್ನು ಕರೆದು ತರಲು, ಕಿಯೋನ ಇಬ್ಬರನ್ನು ಕಳಿಸಿದ. ಇವರು ಅನವಶ್ಯಕವಾಗಿ ಈ ಎಳೇ ಹುಡುಗಿಯನ್ನು ಬಂಧಿಸಿ, ಹೊತ್ತುಕೊಂಡು ಬಂದು, ತಮ್ಮ ಜೊತೆಯವರನ್ನು ಸೇರಿದರು.

ಸ್ವಲ್ಪ ಹೊತ್ತಿನಲ್ಲೇ ಈ ಗುಂಪು, ಬೆಟ್ಟಗುಡ್ಡಗಳ ಕಾಡು ಪ್ರದೇಶದಿಂದ ಹೊರಬಿದ್ದು–ಬಲು ಎತ್ತರವಾಗಿ ಕಡಿದಾಗಿದ್ದ ಸಮುದ್ರ ತೀರದ ಅಂಚಿನಲ್ಲಿ ಹಾದು ಹೋಗುತ್ತಿದ್ದ, ಒಂದು ಬಹಳ ಇಕ್ಕಟ್ಟಾದ ದಾರಿ

ಯಲ್ಲಿ—ಒಬ್ಬರ ಹಿಂದೆ ಒಬ್ಬರಂತೆ ನಡೆದು ಹೋಗುತ್ತಿದ್ದರು. ಈ ಭಾಗದಲ್ಲಿ, ತೀರವು ಅತ್ಯಂತ ಕಡಿದಾಗಿ, ಸುಮಾರು ನೂರು ಅಡಿ ಎತ್ತರದ ಪ್ರಪಾತವಾಗಿತ್ತು. ಕೆಲವೆಡೆಗಳಲ್ಲಿ ತೀರದ ಗಟ್ಟಿಯಾದ ನೆಲ, ನೀರಿನ ಮೇಲೆ ಮುಂದಕ್ಕೆ ಚಾಚಿಕೊಂಡಿತ್ತು. ಕೆಳಗೆ ನೀರು ಬಹಳ ಆಳವಾಗಿತ್ತು.

ಗುಂಪು ಈ ಭಾಗದಲ್ಲಿ ಹೋಗುತ್ತಿದ್ದಾಗ, ಕಿಯೋನ ಕೊಟ್ಟ ಏಟಿನಿಂದ ತತ್ತರಗೊಂಡಿದ್ದ ಬಂಪಸ್, ಚೇತರಿಸಿಕೊಂಡು, ಬಂಧಿಸಲ್ಪಟ್ಟಿದ್ದರೂ—ಒದ್ದಾಡಲು ಪ್ರಾರಂಭಿಸಿದ. ಇದರಿಂದ, ಇಕ್ಕಟ್ಟಾದ ಈ ಸ್ಥಳದಲ್ಲಿ ಹಾದು ಹೋಗುತಿದ್ದವರಿಗೆ, ಬಹಳ ಪ್ರಯಾಸವಾಯಿತು; ಅಷ್ಟೇ ಅಲ್ಲ; ಇವನಿಗೆ, ಇವನ ಶತ್ರುಗಳಿಗೆ, ಇಬ್ಬರಿಗೂ ಅಪಾಯಕರವಾಗಿತ್ತು. ಗುಂಪು ನಡೆಯುತ್ತ, ಇಕ್ಕಟ್ಟಾಗಿದ್ದ ಸ್ಥಳವನ್ನು ದಾಟಿ—ತೀರದ ಅಂಚಿನ ಮೇಲೆ ಸ್ವಲ್ಪ ತೆರಪಾಗಿ-ವಿಶಾಲವಾಗಿದ್ದ ಸ್ಥಳಕ್ಕೆ ಬಂದಿತ್ತು ; ಆಗ ಬಂಪಸ್-ಹೆಚ್ಚುಕಡಿಮೆ ಮನುಷ್ಯಾತೀತ ಬಲ ಪ್ರಯೋಗದಿಂದ ತನ್ನ ಬಂಧನಗಳನ್ನು ಹರಿದು ಹಾಕಿದ. ಅವನು ಇನ್ನೂ ಮೈಗೆ ತೊಡರಿಕೊಂಡಿದ್ದ ಹಗ್ಗದ ತುಂಡುಗಳನ್ನು ಕಿತ್ತೊಗೆಯುತ್ತಿದ್ದಾಗ, ಕಿಯೋನ ಕೋಪೋದ್ರೇಕದಿಂದ ತನ್ನ ಕಡೆಯವರಿಗೆ ಏನೋ ಅಪ್ಪಣೆ ಮಾಡಿದ. ಕೂಡಲೆ ಅವರೆಲ್ಲ ಒಟ್ಟಾಗಿ ಬಂಪಸಿನ ಮೇಲೆ ಬಿದ್ದರು. ಬಂಪಸ್ ವೀರಾವೇಶದಿಂದ ಹೋರಾಡಿದರೂ, ದಸ್ಯುಗಳು ಅತಿವೇಗದಿಂದ ಮೇಲೆ ನುಗ್ಗಿ, ಅವನನ್ನು ಸರ್ರನೆ ಹಿಡಿದು ಎತ್ತಿ—ತಲೆ ಕೆಳಕಾಗಿ ನೀರಿಗೆ ಎಸೆದು ಬಿಟ್ಟರು.

ದಸ್ಯುಗಳ ಈ ಘೋರವಾದ ಕೃತ್ಯವನ್ನು ನೋಡುತ್ತಿದ್ದ ಜೋ ಬಂಪಸಿನ ಎಳೆಯ ಸಂಗಡಿಗರ ಮನಸ್ಸಿನಲ್ಲುಂಟಾದ ಭಯವನ್ನು ಸುಲಭವಾಗಿ ಊಹಿಸಬಹುದು. ಆದರೆ, ತಮ್ಮ ಘೋರಕೃತ್ಯದಿಂದ ರಕ್ತದಾಹಕ್ಕೆ ತುತ್ತಾಗಿದ್ದ ಆ ಪಾತಕ ದಸ್ಯುಗಳು, ಅಲೀಸಳ ಬಳಿಗೆ ಹೋಗಿ, ಅವಳನ್ನೂ ನೀರಿಗೆಸೆಯಲು ಕಡಿದಾದ ತೀರದ ಅಂಚಿನ ತುದಿಗೆ ಹೊತ್ತು ಒಯ್ದಾಗ, ಅವಳ ಉಳಿದ ಇಬ್ಬರು ಗೆಳೆಯರಿಗೆ ಉಂಟಾದ ಉತ್ಕಟ ಭೀತಿಯನ್ನು ವರ್ಣಿಸಲು ಸಾಧ್ಯವಿಲ್ಲ.

ಆದರೆ, ಆ ಪಾಪಿಗಳು ತಮ್ಮ ಉದ್ದೇಶವನ್ನು ನೆರವೇರಿಸುವ ಮೊದಲೇ, ಸಿಡಿಲಿನಂತಹ ಭಯಾನಕ ಶಬ್ದ ಒಂದು ಕೇಳಿಬಂದು— ದಸ್ಯುಗಳು, ಯಾರು ಯಾರು ಎಲ್ಲೆಲ್ಲಿ ಇದ್ದರೋ ಅಲ್ಲಲ್ಲೇ, ಕಲ್ಲು ಕಂಭ ದಂತೆ ನಿಂತುಬಿಟ್ಟಿತು. ಕೂಡಲೆ ಮತ್ತೊಮ್ಮೆ ಮೊದಲಿನಂತೆಯೇ ಕಿವಿಯೊಡೆಯುವಂತೆ ಶಬ್ದವಾಯಿತು. ಅನಂತರ—ಒಂದರ ಮೇಲೊಂದರಂತೆ, ಅನೇಕ ಗುಂಡು ಸಿಡಿದ ಶಬ್ದಗಳು, ಪರಂಪರೆಯಾಗಿ ಕೇಳಿಸಿತು. ಈ ಎಲ್ಲ ಶಬ್ದಗಳೂ ಗುಡ್ಡ ಬೆಟ್ಟ—ಕಾಡುಗಳಲ್ಲಿ ತೂರಿ ಮಾರ್ದನಿಗೊಂಡು, ಇಡೀ ಪ್ರದೇಶವನ್ನು ನಡುಗಿಸಿದಂತೆ ತೋರಿತು.

ಶಬ್ದಗಳು, ಕೇಳಿಬಂದ ಕೂಡಲೆ ದಸ್ಯುಗಳು ದಿಗ್ಭ್ರಾಂತರಾಗಿ, ಭಯಚಕಿತರಾದರು. ಅನಂತರ, ಇಷ್ಟೆಲ್ಲ ಕೋಲಾಹಲಕ್ಕೆ ಕಾರಣ ವಾಗಿದ್ದ ಶಬ್ದಗಳು ತಮ್ಮ ಹಳ್ಳಿಯ ಕಡೆಯಿಂದ ಬರುತ್ತಿದ್ದವೆಂದು ತಿಳಿದು, ಅಲೀಸಳನ್ನು, ಎತ್ತಿಕೊಂಡಿದ್ದ ಸ್ಥಳದಲ್ಲೇ ನೆಲದ ಮೇಲೆ ಬಿಟ್ಟು-ಆ ಎತ್ತರದಿಂದ ಕಣಿವೆಗೆ ಇಳಿಯುತ್ತಿದ್ದ ಒರಟಾದ ವಕ್ರವಾದ ಹಾದಿಯಲ್ಲಿ ದೌಡಾಯಿಸಿ ಮಾಯವಾದರು. ಬಂಧಿತರಾಗಿದ್ದ ಕಾರಿ, ಪೂಪಿ ಮತ್ತು ಅಲೀಸರು—ನಿಸ್ಸಹಾಯರಾಗಿ—ಆ ಕಡಿದಾದ ತೀರದ ಮೇಲೆ ಬಿದ್ದುಕೊಂಡಿದ್ದರು.

---

## ೧೦

## ಬಂಪಸನ ಪುನರ್ಜನ್ಮ

ಬಡಪಾಯಿ ಅಲೀಸಳು, ಅತ್ಯುನ್ನತವಾಗಿ ಪ್ರಪಾತದಂತಿದ್ದ ತೀರದ ಅಂಚಿಗೆ ಸಮೀಪವಾಗಿ ಬಿದ್ದಿದ್ದಳು. ತನ್ನ ಕೈಗಳನ್ನೂ ಕಾಲು ಗಳನ್ನೂ ಭದ್ರವಾಗಿ ಬಂಧಿಸಿದ್ದ ಕಟ್ಟನಿಂದ ಬಿಡಿಸಿಕೊಳ್ಳಲು ಅವಳಿಗೆ ಶಕ್ತಿ ಇರಲಿಲ್ಲ. ಪೂಪಿ, ಅಂಚಿನಿಂದ ಸುಮಾರು ಹತ್ತುಗಜ ದೂರದಲ್ಲಿ ಅಂಗತ್ತನಾಗಿ ಬಿದ್ದುಕೊಂಡಿದ್ದಳು. ಅವಳ ಕೈಗಳು ಬೆನ್ನಹಿಂದೆ

ಕಟ್ಟಲ್ಪಟ್ಟಿದ್ದವು; ಕಾಲುಗಳೂ ಕಟ್ಟಲ್ಪಟ್ಟಿದ್ದವು; ಆದ್ದರಿಂದ ಎಷ್ಟು ಸಾಹಸಪಟ್ಟರೂ ಅವಳಿಗೆ ಎದ್ದು ಕುಳಿತುಕೊಳ್ಳಲಾಗಲಿಲ್ಲ. ಕಾರಿಯನ್ನು ದಸ್ಯುಗಳು ಬಂಧಿಸುತ್ತಿದ್ದಾಗ ಅವನು, ರೋಷಾವೇಶದಿಂದ ಒದೆಯುತ್ತ, ಹೊಡೆಯುತ್ತ, ಕಚ್ಚುತ್ತ, ಪರಚುತ್ತ, ಚಿವುಟುತ್ತ ಹೋರಾಡಿದ್ದ. ಆದ್ದರಿಂದ ಅವರು, ಸ್ವಲ್ಪ ಹೆಚ್ಚಾಗಿಯೇ ತೆಂಗಿನ ನಾರಿನ ಹಗ್ಗವನ್ನು ಉಪಯೋಗಿಸಿ, ಇವನ ಮೈ ಕೈಗಳನ್ನೆಲ್ಲಾ ಸುತ್ತಿ ಸುತ್ತಿ ಬಂಧಿಸಿದ್ದರು. ಆದ್ದರಿಂದ ಇವನು ಅಲ್ಲಾಡುವ ಹಾಗೇ ಇರಲಿಲ್ಲ. ಇವನು, ಅಲೀಸಳಿಗೂ—ಪೂಪಿಗೂ ಮಧ್ಯೆ ಮಗ್ಗುಲಾಗಿ ಬಿದ್ದುಕೊಂಡು—ಬಂಧನದಿಂದ ಬಿಡಿಸಿಕೊಳ್ಳಲು ಉಪಾಯವನ್ನು ಯೋಚಿಸುತ್ತಿದ್ದ.

ಸ್ವಲ್ಪ ಹೊತ್ತಾದ ಮೇಲೆ ಕಾರಿ, ಪೂಪಿಯನ್ನುದ್ದೇಶಿಸಿ,

"ಪೂಪಿ, ನೀನು ಉರುಳಿಕೊಂಡು ನನ್ನ ಹತ್ತಿರ ಬಾ; ಆಮೇಲೆ ನನ್ನ ಬೆನ್ನು ಸ್ವಲ್ಪ ಎತ್ತುತ್ತೀನಿ; ಆಗ ನೀನು ನಿನ್ನ ಭುಜಾನ ಅದರ ಕೆಳಗೆ ತಳ್ಳು-ಆಗ ನಾನು ಎದ್ದು ಕೂತುಕೊಳ್ಳೋಕೆ ಆಗಬಹುದು" —ಎಂದ. ಪೂಪಿ ನಗುತ್ತ,

"ಹೀ! ಹಿ!—ಬಹಳ ಒಳ್ಳೇದು—ಕೆಲಸ!—ನಾನು ಬರುತ್ತೇನೆ!—ನೋಡು!"

—ಎನ್ನುತ್ತ, ಉರುಳುವುದಕ್ಕೇ ಶುರುಮಾಡಿದಳು. ಅವಳ ಕಡೆಯಿಂದ ತೀರದ ಕಡೆಗೆ ನೆಲ ಇಳಿಜಾರಾಗಿತ್ತು. ಅವಳು ಉರುಳಿ ಬಂದ ರಭಸಕ್ಕೆ—ಕಾರಿಯ ಮೇಲೆ ಹಾದು—ಇನ್ನೇನು, ಮುಂದಕ್ಕೆ ಉರುಳುತ್ತ—ಅಲೀಸಳಿದ್ದ ಜಾಗವನ್ನು ತಲುಪಿ—ಅಲ್ಲಿಂದ ಮುಂದೆ ನೀರಿಗೂ ಬಿದ್ದುಬಿಡುವುದರಲ್ಲಿದ್ದಳು; ಅವಳ ಉಡುಪಿನ ತೋಳನ್ನು ಕಾರಿ ಬಲವಾಗಿ ಕಚ್ಚಿ ಅವಳನ್ನು ತಡೆದ.

ಕಾರಿ ಯೋಚಿಸಿದ ಉಪಾಯ ಚೆನ್ನಾಗಿ ನೆರವೇರಿತು. ಪೂಪಿ ಕೊಟ್ಟ ಆಸರೆಯ ಸಹಾಯದಿಂದ,ಅವನು ಮೆಲ್ಲಮೆಲ್ಲಗೆ ಎದ್ದು ಕುಳಿತು, ಹಾಗೆಯೇ ಮಂಡಿಯ ಮೇಲೆ ನಡೆಯುತ್ತ-ಅಲೀಸಳಿದ್ದಲ್ಲಿಗೆ ಹೋದ. ಅನಂತರ ಅವಳ ಕೈ-ಕಾಲುಗಳಿಗೆ ಕಟ್ಟಿದ ಹಗ್ಗವನ್ನು-ನಿಧಾನವಾಗಿ

ತನ್ನ ಹಲ್ಲುಗಳಿಂದ ಕಡಿದು ಕಡಿದು ಕತ್ತರಿಸಿ ಹಾಕಿದ. ಈ ಕೆಲಸ ಸುಲಭವಾಗಿರಲಿಲ್ಲ. ಅಲೀಸಳು ಬಂಧನದಿಂದ ಬಿಡುಗಡೆಯಾದ ಮೇಲೆ, ಇನ್ನಿಬ್ಬರ ಬಂಧನಗಳನ್ನು ಬಿಚ್ಚಿದಳು. ಹಗ್ಗಗಳು ಒರಟಾಗಿದ್ದದ್ದರಿಂದಲೂ, ಕಟ್ಟುಗಳು ಬಿಗಿಯಾಗಿದ್ದದ್ದರಿಂದಲೂ, ಈ ಕೆಲಸಕ್ಕೆ ತಕ್ಕಮಟ್ಟಿಗೆ ಕಾಲ ಹಿಡಿಯಿತು.

ಮೂರು ಜನರೂ ಬಂಧನದಿಂದ ಬಿಡುಗಡೆಯಾದ ಕೂಡಲೆ ಕಾರಿ, " ಈಗ ನಾವು ತೀರದ ಕೆಳಭಾಗಕ್ಕೆ ಇಳಿದು ಹೋಗಿ, ನಮ್ಮ ಬಂಪಸ್ ಏನಾದನೋ ನೋಡಬೇಕು "—ಎಂದ.

ಕೂಡಲೆ, ಎಷ್ಟು ಸಾಧ್ಯವೋ ಅಷ್ಟುಬೇಗ–ಒಂದು ಹಾದಿಯನ್ನು ಹುಡುಕಿ, ಆ ಎತ್ತರದಿಂದ ನೀರಿನ ಮಟ್ಟಕ್ಕೆ ಇಳಿದರು. ಅಲ್ಲಿ ಸ್ವಲ್ಪ ಹೊತ್ತು ಹುಡುಕಿದ ಮೇಲೆ,ಒಂದು ಕಡೆ ಬಂಡೆಗಳ ನಡುವೆ ಬಂಪಸ್, ಜ್ಞಾನವಿಲ್ಲದೆ ಅಂಗತ್ತನಾಗಿ ಬಿದ್ದಿದ್ದುದು ಇವರಿಗೆ ಕಾಣಿಸಿತು. ಅವನ ಕಾಲುಗಳು ನೀರಿನಲ್ಲಿ ಮುಳುಗಿದ್ದವು.

ಬಂಪಸನ ಒಂದು ಭಾರಿ ತೋಳನ್ನು ಕಾರಿ ಹಿಡಿದುಕೊಂಡ. ಅಲೀಸಳಿಗೆ ಇನ್ನೊಂದು ತೋಳನ್ನು ಹಿಡಿದುಕೊಳ್ಳುವಂತೆ ಹೇಳಿದ. ಪೂಪಿ ಅಪ್ಪಣೆ ಗಿಪ್ಪಣೆಗಳಿಗೆ ಕಾಯದೆ, ಬಂಪಸನ ತಲೆ ಕೂದಲಿಗೆ ಕೈ ಹಾಕಿದಳು. ಮೂರು ಮಂದಿಯೂ ತಮ್ಮಶಕ್ತಿಯನ್ನೆಲ್ಲಾ ಬಿಟ್ಟು ಆ ಘಟವನ್ನು ಎಳೆಯತೊಡಗಿದರು. ಅದರ ಬದಲು ಅವರು, ಒಂದು ಯುದ್ಧದ ಹಡಗನ್ನು ತೀರಕ್ಕೆ ಎಳೆಯುವ ಸಾಹಸ ಮಾಡಬಹುದಿತ್ತು! ನಾವಿಕನ ಬೆಟ್ಟದಂಥ ಮೈ ಅಚಲವಾಗಿತ್ತು. ಈ ಪ್ರಯತ್ನದಲ್ಲಿ ವಿಫಲರಾಗಿ ಅವರು ತಮ್ಮ ಉಪಾಯವನ್ನು ಬದಲಾಯಿಸಿದರು. ಮೂರು ಜನರೂ ಅವನ ಕಾಲುಗಳನ್ನು ನೀರಿನಿಂದ ಎತ್ತಿಹಿಡಿದು— ಅವನ ದೇಹವನ್ನು ಸ್ವಲ್ಪಮಟ್ಟಿಗೆ ಒಂದು ಪಕ್ಕಕ್ಕೆ ತಿರುಗಿಸಿದರು.

ಕಾರಿ ಉತ್ಸಾಹದಿಂದ, "ಈಗ ಇವನಿಗೆ ಸ್ವಲ್ಪ ಬೆಚ್ಚಗೆ ಮಾಡಬೇಕು"—ಎಂದ. ಕೂಡಲೆ ಮೂವರೂ ಅವನ ಹತ್ತಿರ ಕುಳಿತು, ಅವನ ಅಂಗೈ, ಅಂಗಾಲು-ಎದೆ ಮುಂತಾದವುಗಳನ್ನು ತಮ್ಮ ಕೈಯಿಂದ ಉಜ್ಜಿ ಶಾಖ ಹುಟ್ಟುವಂತೆ ಮಾಡಿದರು. ಹೀಗೆ ಅವರು ಬಹಳ ಹೊತ್ತು

ಬಿಡದೆ ಮಾಡಿದ ಮೇಲೆ, ಜಾನ್ ಬಂಪಸಿಗೆ ನಿಧಾನವಾಗಿ ಚೇತನ ಉಂಟಾಗತೊಡಗಿತು. ಮೊದಲು ನಾವಿಕನ ಎಡಗಣ್ಣಿನ ರೆಪ್ಪೆ ಕಂಪಿಸ ತೊಡಗಿತು. ಇದನ್ನು ನೋಡಿ, ಆ ಮೂರು ಮಂದಿಯ ಪುಟ್ಟ ಹೃದಯಗಳೂ ಆಸೆಯಿಂದ ತುಂಬಿದವು. ಅನಂತರ ಬಲಗಣ್ಣಿ ರೆಪ್ಪೆಯೂ ಕಂಪಿಸಿತು; ಆಮೇಲೆ ಅವನ ವಿಶಾಲವಾದ ಎದೆ, ಹೌದೋ ಅಲ್ಲವೋ ಅನ್ನುವಂತೆ ಸ್ವಲ್ಪ ಉಬ್ಬಿತು; ಕಡೆಗೆ ಅವನ, ನೀಲಿಗಟ್ಟಿ ತಣ್ಣಗಾಗಿದ್ದ ತುಟಿಗಳಿಂದ, ಮೆಲ್ಲಗೆ ಒಂದು ಸಲ, ಉಸಿರಾಡಿತು.

ಕಾರಿಗೂ ಬಂಪಸಿಗೂ ಪರಿಚಯವಾಗಿ ಬಹಳ ಕಾಲವಾಗಿರಲಿಲ್ಲ. ಈ ಅಲ್ಪಾವಧಿಯಲ್ಲೇ ಹುಡುಗ, ಆ ನಾವಿಕನ ವಿಷಯವಾಗಿ ಬಹಳ ಮೆಚ್ಚಿಕೆಯನ್ನೂ ಅಸಾಧಾರಣ ಪ್ರೀತಿಯನ್ನೂ ಹೊಂದಿದ್ದ. ಇದೇ ಮೊದಲು ಅವನನ್ನು ನೋಡಿದ ಪೂಪಿ-ಅಲೀಸರೂ, ಕೇವಲ ಸಹಾನುಭೂತಿಯಿಂದ ಅವನ ವಿಷಯವಾಗಿ ಪ್ರೀತರಾಗಿದ್ದರು. ಈಗ, ಸತ್ತಿರುವನೆಂದೇ ತಾವು ಭಾವಿಸಿದ್ದ ಅವನು, ತಮ್ಮ ಅಲ್ಪ ಪ್ರಯತ್ನದಿಂದ ಅನಿರೀಕ್ಷಿತವಾಗಿ, ಪುನರ್ಜನ್ಮ ಪಡೆದವನಂತೆ ಚೇತರಿಸಿಕೊಂಡಿದ್ದರಿಂದ, ಅವರು ಅವನಿಗೆ ಇನ್ನೂ ಹತ್ತಿರದವರಾದರು. ಈ ಕಾರಣದಿಂದ, ಅವನು ಇನ್ನು ಮುಂದೆ ಎಂದೆಂದಿಗೂ ತನ್ನನ್ನು, ಅವರ ಸ್ವಂತ ಆಸ್ತಿಯಂತೆ ನಡೆದುಕೊಳ್ಳುವುದು ನ್ಯಾಯವೆಂದೂ—ಅವನ ಕರ್ತವ್ಯವೆಂದೂ ಅವರು ಭಾವಿಸಿದ್ದರು! ಆದ್ದರಿಂದ, ಅವನಲ್ಲಿ ಪ್ರಾಣ ಸಂಚಾರದ ಸೂಚನೆಯನ್ನು ಕಂಡಾಗ, ಈ ಮಕ್ಕಳಲ್ಲಿ ಉಂಟಾದ ಸಂತೋಷದ ಉತ್ಕರ್ಷವನ್ನು ವರ್ಣಿಸುವುದು ಸುಲಭವಲ್ಲ. ಕಾರಿ, ಭಾವೋದ್ರೇಕಕ್ಕೆ ತುತ್ತಾಗದಿರಲು, ಸರ್ವಪ್ರಯತ್ನ ಮಾಡುತ್ತಿದ್ದ. ಅಲೀಸಳಂತೂ ಬಂಪಸಿನ ಕೈಕಾಲುಗಳನ್ನು ಉಜ್ಜುತ್ತ ಉಜ್ಜುತ್ತ—ಉಕ್ಕುತ್ತಿದ್ದ ಸಂತೋಷದಿಂದ ನಿಶ್ಶಬ್ದವಾಗಿ ಅತ್ತಳು. ಪೂಪಿ ತನ್ನ ಭಾವೋದ್ರೇಕವನ್ನು ತಡೆಯಲಾರದವಳಾಗಿದ್ದಳು. ಅವಳು ಹುಚ್ಚಿಯಂತೆ "ಹೀ ಹೀ !–ಹೋ ಹೋ !"–ಎಂದು ಗಟ್ಟಿಯಾಗಿ ನಗುತ್ತ ಕುಣಿದಾಡಿದಳು.

ಮೂವರೂ ಬಂಪಸಿನ ಕೈ-ಕಾಲು-ಮೈಗಳನ್ನು ಉಜ್ಜಿ-ಶಾಖ

ವುಂಟಾಗುವಂತೆ ಮಾಡಿದಮೇಲೆ-ಕಾರಿ, ಅಂಗತ್ತನಾಗಿ ಮಲಗಿದ್ದ ಆ ನಾವಿಕನ ಹೊಟ್ಟೆಯಮೇಲೆ, ತನ್ನ ಎರಡು ಮುಷ್ಟಿಗಳನ್ನೂ ಇಟ್ಟು ಬಲವಾಗಿ ಎರಡು ಮೂರು ಸಲ ಒತ್ತಿದ; ಜೋ, ಒಂದು ಸಲ ನೀಳ ವಾಗಿ ಉಸಿರೆಳೆದು, ಆ ಸಮಯದಲ್ಲಿ ಅವನ ಮುಖವನ್ನೇ ನೋಡು ತ್ತಿದ್ದ ಪೂಪಿ ಹಾರಿಬೀಳುವ ಹಾಗೆ, ಒಂದು ಭಾರಿ ಸೀನು ಉಡಾಯಿ ಸಿದ! ಅದೇ ಕ್ಷಣದಲ್ಲಿ ಅವನ ಬಲತೋಳು-ಎದ್ದು- ಪಕ್ಕದಲ್ಲಿ ಕೂತಿದ್ದ ಕಾರಿಯ ಎದೆಯಮೇಲೆ ಬೀಸಿ ಬಿತ್ತು. ಅದರ ಏಟಿಗೆ ಕಾರಿ, ಹಿಂದಕ್ಕೆ ಬೆನ್ನ ಮೇಲೆ ಉರುಳಿಬಿದ್ದ! ಅನಂತರ, ಮತ್ತೊಮ್ಮೆ ದೀರ್ಘವಾಗಿ ಉಸಿರೆಳೆದು ಬಿಟ್ಟು-ಕಾಲುಗಳನ್ನು ಎತ್ತಿ ಒದರಿ, ಎದ್ದು, ದಿಗ್ಭ್ರಮೆಯಿಂದ ಕಣ್ಣರಳಿಸಿ ನೋಡುತ್ತ—ಅಡಿಗಡಿಗೆ ನಿಟ್ಟುಸಿರು ಬಿಡುತ್ತ, ಮಾತನಾಡದೆ ಕುಳಿತ.

ಸ್ವಲ್ಪ ಹೊತ್ತಾದ ಮೇಲೆ, ಬಂಪಸ್ ತನ್ನ ಮುಂದಿದ್ದವರನ್ನು ನೋಡುತ್ತ,

"ಈಗ ಮುಂದೆ ಏನು ಮಾಡೋದು?"—ಎಂದು ಕೇಳಿದ.

ಅವನ ಧ್ವನಿಯನ್ನು ಕೇಳಿ ಕಾರಿ, "ಹುರ್ರಾ!" ಎಂದು ಚೀರಿ, ಅರಳಿದ ಮುಖದಿಂದ, ಅವನ ಮುಂದೆ ಕುಣಿದಾಡಿದ

* * * *

ಮುಂದಿನ ಘಟನೆಗಳಿಂದ, ಬಂಪಸ್ ಬಹು ಬೇಗ ತನ್ನ ಜೊತೆ ಯಲ್ಲಿದ್ದ ಹುಡುಗ—ಹುಡುಗಿಯರಿಂದ ಅಗಲುವಂತಾಯಿತು.

ಕೆಲವು ಕ್ಷಣಗಳ ತರುವಾಯ, ಇವರು ನಡೆದು ಬರುತ್ತಿದ್ದಾಗ, ಮೆಳೆಗಳ ಸಂದಿನಲ್ಲಿ ಒಂದು ಕಾಡು ಹಂದಿ ಕಾಣಿಸಿಕೊಂಡಿತು. ಇವರಿ ಗೆಲ್ಲಾ ಬಹಳ ಹಸಿವಾಗಿದ್ದದ್ದರಿಂದ ಬಂಪಸ್, ಕಾರಿಯನ್ನು ಹುಡುಗಿ ಯರ ಕಾವಲಿಗೆ ಬಿಟ್ಟು, ಆ ಪ್ರಾಣಿಯನ್ನು ಅಟ್ಟಿಕೊಂಡು ಹೋದ. ಹಂದಿಯನ್ನು ಹುಡುಕುತ್ತಿದ್ದ ಸಮಯದಲ್ಲಿ, ಇವನು ಹೆನ್ರಿ ಸ್ಟೂಯರ್ಟನ ಗುಂಪನ್ನು ಕಂಡು-ಅವರೊಡನೆ ಸೇರಿಕೊಂಡ ಇವನು ಇಲ್ಲದೇ ಇದ್ದಾಗ, ಹುಡುಗರು, ತೀರದಮೇಲೆ ಅವಿತಿರಲು ಕಳಿಸಲ್ಪ ಟ್ಟಿದ್ದ ಫೋಮಿನ ನಾವಿಕರ ಕೈಗೆ ಬಿದ್ದರು. ಅವರು ಈ ಮೂವರನ್ನೂ

ಅಪಹರಿಸಿ ಕೊಂಡು ಹೋದರು. ಕಾರಣವೇನೆಂದರೆ, ಅವರು ನಿಜ ವಾಗಿಯೂ ಕಡಲ್ಗಳ್ಳರಾಗಿದ್ದರು.

---

## ೧೧

## ಒಬ್ಬ ಕಡಲ್ಗಳ್ಳನ ಹೇಳಿಕೆ

ದ್ವೀಪದಲ್ಲಿ ಶಾಂತಿ ಸ್ಥಾಪನೆಯಾದ ಮೇಲೆ,ಒಂದು ದಿದ ಬೆಳಗ್ಗೆ, ಮಿಶನರಿ ಮೇಸನೂ, ಹೆನ್ರಿಯೂ, ಮಿಸೆಸ್ ಸ್ಟೂಯರ್ಟಳ ಕುಟೀರ ದಲ್ಲಿ—ಅವಳೊಡನೆ ಮಾತನಾಡುತ್ತ ಕುಳಿತಿದ್ದರು.

ಆಗ ಹಠಾತ್ತನೆ ಬಾಗಿಲನ್ನು ತೆರೆದು, ಗ್ಯಾಸ್ಕೋಯಿನ್ ಪ್ರವೇ ಶಿಸಿದ. ಬಂದವನೇ, ತನ್ನ ಷರಟಿನ ಒಳಜೇಬಿನಲ್ಲಿ ಬಚ್ಚಿಟ್ಟುಕೊಂಡಿದ್ದ ಒಂದು ಜೊತೆ ಪಿಸ್ತೂಲುಗಳನ್ನು ಈಚೆಗೆ ತೆಗೆದ; ಅನಂತರ ತನ್ನ ಸೊಂಟದ ಪಟ್ಟೆಯಿಂದ ತೂಗಾಡುತ್ತಿದ್ದ ಉದ್ದವಾದ ಚಾಕುವನ್ನು ಒರೆಯಿಂದ ಎಳೆದ; ಇವಷ್ಟನ್ನೂ ತೆರೆದಿದ್ದ ಕಿಟಕಿಯ ಮೂಲಕ ತೋಟಕ್ಕೆ ಎಸೆದ. ಆಮೇಲೆ, ಒಂದು ಕುರ್ಚಿಯನ್ನು ಎಳೆದುಕೊಂಡು ಕೊಠಡಿಯ ಮಧ್ಯದಲ್ಲಿಟ್ಟು, ಅದರ ಮೇಲೆ ಕುಳಿತುಕೊಂಡ. ಆ ದಿನ, ಅವರೊಡನೆ ಮಾತನಾಡುತ್ತಿದ್ದಷ್ಟು ಕಾಲವೂ, ಅವನ ಗಂಭೀರವಾದ ಗುಡುಗಿನಂತ ಧ್ವನಿಯಲ್ಲಿ ವಿಷಣ್ಣತೆ ಬೆರೆತಿತ್ತು. ಈ ವಿಚಿತ್ರ ಮನುಷ್ಯನ ಮುಖದ ಕ್ಷಾತ್ರ ಕಳೆ ಮಾಯವಾಗಿ ಈಗ ಅಲ್ಲಿ ಗಂಭೀರವೂ—ದೈನ್ಯವೂ ಆದ ಭಾವ ಕಾಣುತ್ತಿತ್ತು. ಆಗಾಗ ಅವ ಕಣ್ಣುಗಳಲ್ಲಿ ಏನೋ ಅಶಾಂತಿಯ ನೋಟ ಕಾಣುತ್ತಿತ್ತು.

ಗ್ಯಾಸ್ಕೋಯಿನ್ ಮಾತು ಪ್ರಾರಂಭಿಸಿದ: “ ನಾನು ಏತಕ್ಕೆ ಇಲ್ಲಿಗೆ ಬಂದೆನೋ ಅದರ ವಿಷಯ ಹೇಳುವುದಕ್ಕೆ ಮೊದಲು, ಒಂದು ಮಾತು ಒಪ್ಪಿಕೊಳ್ಳಬೇಕೆಂದು ಮನಸ್ಸು ಮಾಡಿದ್ದೇನೆ. ನಿಮ್ಮ ಸಂಶಯಗಳು ಸರಿಯಾಗಿಯೇ ಇವೆ—ಸಮುದ್ರಗಳ್ಳ ಡರ್‌ವರ್ಡ್

ನಾನೆ !....ಬೇಡ, ಮೇರೀ !—ನನ್ನ ಮಾತುಗಳನ್ನು ಕೇಳಿ ಹಾಗೆ ಮುದುರಿಕೊಳ್ಳಬೇಡ. ಬಾಲ್ಯದಿಂದ ನನಗೂ ನಿನಗೂ ಇದ್ದು ಬಂದಿರುವ ಹಳೆಯ ಸ್ನೇಹವನ್ನು ಎಲ್ಲಿ ಕಳೆದುಕೊಳ್ಳುವೆನೋ ಎಂದು ಹೆದರಿ, ಇಷ್ಟು ದಿನ ಈ ರಹಸ್ಯವನ್ನು ನಿನಗೆ ತಿಳಿಸಿರಲಿಲ್ಲ. ಇದೊಂದರಲ್ಲಿ ಮಾತ್ರ ನಾನು ನಿನಗೆ ಮೋಸ ಮಾಡಿದ್ದೇನೆ. ನಾನು ಕೇವಲ ಒಬ್ಬ ಕಳ್ಳ ಸಾಗಾಣಿಕೆಯ ವ್ಯಾಪಾರಿಯೆಂದೂ, ಕಾನೂನಿಗೆ ವಿರುದ್ಧವಾಗಿ ಕೆಲಸ ಮಾಡುತ್ತಿದ್ದುದರಿಂದ, ನನ್ನ ಹೆಸರನ್ನೂ—ಚಲನವಲನಗಳನ್ನೂ ಮರೆಯಾಗಿಡುವುದು ಅವಶ್ಯಕವಾಗಿತ್ತೆಂದೂ, ಏನೂ ಅರಿಯದ ನೀನು ನಂಬುವಂತೆ ಮಾಡಿದೆ ನೀನು ನನ್ನ ರಹ್ಯವನ್ನು ಕಾಪಾಡಿರುವೆ—ಮೇರಿ ; ಅಷ್ಟೇ ಅಲ್ಲ, ನನ್ನನ್ನು ಸರಿಯಾದ ಮಾರ್ಗಕ್ಕೆ ತಿರುಗಿಸಿಕೊಳ್ಳಲೂ ಪ್ರಯತ್ನ ಪಟ್ಟಿರುವೆ. ಆದರೆ, ನಾನು ಎಂಥ ಬಲೆಯಲ್ಲಿ ಸಿಕ್ಕಿಹಾಕಿಕೊಂಡಿದ್ದೆ ಎಂದು ನೀನು ಸ್ವಲ್ಪವೂ ಕಾಣೆ. ನಾನೊಬ್ಬ ಸಮುದ್ರಗಳ್ಳನೆಂದು ನಿನಗೆ ಗೊತ್ತಿರಲಿಲ್ಲ.''

ಗ್ಯಾಸ್ಕೊಯಿನ್ ಸ್ವಲ್ಪ ಹೊತ್ತು ನಿಲ್ಲಿಸಿ, ಏನೋ ಯೋಚಿಸುತ್ತಿರುವಂತೆ ತಲೆಯನ್ನು ಬಗ್ಗಿಸಿದ. ವಿಧವೆ ಕೈಯ್ಯಲ್ಲಿ ಕೈ ಇಟ್ಟುಕೊಂಡು, ಬಿಳುಪೇರಿದ ಮುಖದಿಂದಲೂ, ಆಶಾಶೂನ್ಯವಾದ ನೋಟದಿಂದಲೂ ಅವನನ್ನೇ ದಿಟ್ಟಿಸಿ ನೋಡುತ್ತಿದ್ದಳು. ಕೇಳುತ್ತಿದ್ದ ಮೂವರೂ ಪೂರ್ಣ ಮೌನದಿಂದ ಕುಳಿತಿದ್ದರು. ಕಡಲ್ಗಳ್ಳ ತನ್ನ ಹೇಳಿಕೆಯನ್ನು ಮುಂದುವರಿಸಿದ :

" ಹೌದು ನಾನೊಬ್ಬ ಕಡಲ್ಗಳ್ಳ ; ಆದರೆ, ಜನ ಆಡಿಕೊಳ್ಳುತ್ತಿರುವಂತೆ—ಕೇಡಿಗನಲ್ಲ—ದುರಾತ್ಮನಲ್ಲ. "

ಈ ಮಾತುಗಳನ್ನು ಅವನು, ವಿಧವೆಯ ಮುಖವನ್ನು ನೇರವಾಗಿ, ನಟ್ಟದೃಷ್ಟಿಯಿಂದ ನೋಡುತ್ತ, ಹೇಳಿದ.

ಮೇಸನ್ ಗಂಭೀರವಾಗಿ, " ಗ್ಯಾಸ್ಕೋಯಿನ್, ನಿನ್ನ ದೋಷ ತಗ್ಗಿಸುವ ಪ್ರಯತ್ನ ಮಾಡಬೇಡ. ನಿನ್ನ ಪಾಪ ತೀರ ಕಪ್ಪಾಗಿದೆ. ಜನರು ಆಡಿಕೊಳ್ಳುವ ಯಾವ ಮಾತೂ ಅದಕ್ಕಿಂತ ಕಪ್ಪಾಗಿ ವರ್ಣಿಸಲಾರದು ; ಯಾರೂ ಅದರ ಕಪ್ಪನ್ನು ಕಡಿಮೆ ಮಾಡಲಾರರು.

ನೀನೊಬ್ಬ ಸಮುದ್ರಗಳ್ಳ. ಪ್ರತಿಯೊಬ್ಬ ಸಮುದ್ರಗಳ್ಳನೂ ಕೊಲೆ ಪಾತಕ ''—ಎಂದ.

" ನಾನು ಕೊಲೆಪಾತಕನಲ್ಲ "—ಎಂದು ನಿಧಾನವಾಗಿ ಉತ್ತರ ಕೊಟ್ಟ ಗ್ಯಾಸ್ಕೋಯಿನ್. ಆದರೆ ಅವನ ದೃಷ್ಟಿ ಮಾತ್ರ ವಿಧವೆಯ ಮುಖದ ಮೇಲೆ ಇತ್ತು. ಅವನು ತನ್ನ ಮಾತುಗಳನ್ನೆಲ್ಲ ಅವಳಿಗೇ ಹೇಳುತ್ತಿರುವಂತೆ ತೋರುತ್ತಿತ್ತು

" ನೀನು ನಿನ್ನ ಕೈಯ್ಯಾರ ಕೊಲೆ ಮಾಡದೆ ಇರಬಹುದು; ಆದರೆ ಮನುಷ್ಯ ಗಣನೆಯಲ್ಲಿ—ದೇವರ ದೃಷ್ಟಿಯಲ್ಲಿ, ಯಾವನು, ಇತರರ ಕೈಲಿ ಕೊಲೆ ಮಾಡಿಸುತಾನೋ ಅವನೂ ಕೊಲೆಗಡುಕನೇ "—ಎಂದು ಉತ್ತರ ಕೊಟ್ಟ—..ೀಸನ್.

ನೋಟವನ್ನು ಬದಲಾಯಿಸದೆ, ಮೊದಲಿನಂತೆಯೇ ನಿಧಾನವಾಗಿ,

" ನಾನು ಯಾರ ಕೈಲೂ ಕೊಲೆ ಮಾಡಿಸಿಲ್ಲ. ಈ ಕೈ—ಮನುಷ್ಯ ರಕ್ತದಿಂದ ಕೊಳೆಯಾಗಿಲ್ಲ. ನನ್ನನ್ನು ನಂಬುವುದಿಲ್ಲವೇ—ಮೇರೀ ? "—ಎಂದ ಗ್ಯಾಸ್ಕೋಯಿನ್.

ವಿಧವೆ ಮಾತನಾಡಲಿಲ್ಲ. ಕಡೆದ ಕಲ್ಲಿನ ಗೊಂಬೆಯಂತೆ ಕುಳಿತಿದ್ದಳು.

ಕಡಲ್ಗಳ್ಳರ ನಾಯಕ, ಒಂದುಸಲ ದೀರ್ಘವಾಗಿ ಉಸಿರೆಳೆದು, ಈಗ ಹೆನ್ರಿಯ ಕಡೆ ನೋಟವನ್ನು ತಿರುಗಿಸಿ,

" ಬಿಡಿಸಿ ಹೇಳುತ್ತೇನೆ. ಕಾರಣಾಂತರಗಳಿಂದ—ಅವು ಏನು ಎಂದು ನೀವು ತಿಳಿದುಕೊಳ್ಳುವುದು ಅನಾವಶ್ಯಕ—ಅಂತು ಕೆಲವು ಕಾರಣಗಳಿಂದ— ಕಡಲ್ಗಳ್ಳನಾಗಬೇಕೆಂದು ಕೆಲವು ವರ್ಷಗಳ ಹಿಂದೆ ನಿರ್ಧರಿಸಿದೆ. ಐಶ್ವರ್ಯವಂತರೂ—ಬಲಾಢ್ಯರೂ ಆದವರು ನನ್ನನ್ನು ವಂಚಿಸಿದ್ದರು—ತೀರ ನಾಚಿಕೆಗೆಟ್ಟ ರೀತಿಯಲ್ಲಿ—ವಂಚಿಸಿದ್ದರು; ಅನ್ಯಾಯಮಾಡಿದ್ದರು. ನಮ್ಮ ದೇಶದ ಕಾನೂನನ್ನು ಮರೆಹೊಕ್ಕು ಪ್ರಾರ್ಥಿಸಿದೆ; ಆದರೆ, ಕಾನೂನು, ನನಗಾಗಿದ್ದ ಅನ್ಯಾಯವನ್ನು ತಿದ್ದಿ-ನನಗೆ ನ್ಯಾಯ ದೊರಕಿಸಿಕೊಡಲು ನಿರಾಕರಿಸಿತು;... ಅಲ್ಲ-ಕಾನೂನು

—ಅಲ್ಲ, ನಿರಾಕರಿಸಿದ್ದು; ಅದನ್ನು ಕಲಿಕೆಳಗುಮಾಡಲು ನ್ಯಾಯಾಸ್ಥಾನದಲ್ಲಿ ಕುಳಿತವರು ನಿರಾಕರಿಸಿದರು. ಅದರ ಕಥೆ ಈಗ ಬೇಡ—ಆ ಸಮಯದಲ್ಲಿ ನಾನು ಸಿಟ್ಟಿನಿಂದ ಹುಚ್ಚನಾದೆ. ಏಕೆಂದರೆ, ಅವರು ಮಾಡಿದ ಅನ್ಯಾಯ ನನಗಿಂತಲೂ, ನಾನು ಯಾರನ್ನು ಪ್ರೀತಿಸುತ್ತಿದ್ದೆನೋ ಅವರಿಗೇ ಹೆಚ್ಚಾಗಿತ್ತು. ಆದ್ದರಿಂದ ಅವರ ಅನ್ಯಾಯಕ್ಕೆ ತಕ್ಕ ಪ್ರತೀಕಾರ ಮಾಡುವುದಾಗಿ, ಆಣೆಯಿಟ್ಟು ನಿರ್ಧರಿಸಿದೆ.

"ನನಗೆ ಬೇಗನೇ ತಕ್ಕ ಜನ ಸಿಕ್ಕರು. ಅವರೂ ಬೇರೆ ಬೇರೆ ಕಾರಣಗಳಿಂದ ನನ್ನ ಹಾಗೆಯೇ ಕೋಪೋನ್ಮತ್ತರಾಗಿ, ಪ್ರತಿ ಹಿಂಸೆಗೆ ಸಿದ್ಧರಾಗಿದ್ದವರಾಗಿದ್ದರು. ಅವರಿಗೆಲ್ಲ ಬೇಕಾಗಿದ್ದದ್ದು—ಒಬ್ಬ ಮುಖಂಡ. ನಾನು ಆ ಮುಖಂಡನಾದೆ. ಆ ಸಮಯದಲ್ಲಿ ನಾನು "**ಫೋಮಿ**"ನಮೇಲೆ ಒಬ್ಬ ಮೇಟ್ ಆಗಿದ್ದೆ. ಸಮಯ ಸಾಧಿಸಿ—ನನ್ನ ಜನರೊಡನೆ ದಂಗೆಯೆದ್ದು, ಆ ಹಡಗನ್ನು ನನ್ನ ವಶಪಡಿಸಿಕೊಂಡು, "**ಅವೆಂಜರ್**" ಎಂದು ಅದರ ಹೆಸರು ಬದಲಾಯಿಸಿ—ಕಡಲ್ಗಳ್ಳನಾದೆ. ನಾನು ಸ್ಕೂನರನ್ನು ಹಿಡಿದು ವಶಪಡಿಸಿಕೊಂಡಾಗ ಸ್ವಲ್ಪವೂ ರಕ್ತಪಾತವಾಗಲಿಲ್ಲ. ಆದರೆ, ನಾನು ಕೈಕೊಂಡ ಹೊಸ ಕಸಬಿನಲ್ಲಿ ಕಾಲಿಡಲು ಅವಕಾಶಸಿಕ್ಕುವ ಮೊದಲೇ, ನನ್ನ ಮೊದಲಿನ ಕೋಪ ಆರಿ ಇಳಿದು ಹೋಯಿತು. ನಾನು ಮಾಡಿದ್ದಕ್ಕೆ ಪಶ್ಚಾತ್ತಾಪವಾಯಿತು. ಆದರೆ ನನ್ನ ಸುತ್ತ ಇದ್ದ ಜನ ಹೊಸ ಕಸಬಿನಲ್ಲಿ ಮುಂದರಿಯಲು ನನಗಿಂತಲೂ ಹೆಚ್ಚು ಉತ್ಸಾಹಿಗಳಾಗಿದ್ದರು. ಆದ್ದರಿಂದ, ನಾನು ಈಗ ಹಿಮ್ಮೆಟ್ಟುವ ಹಾಗಿರಲಿಲ್ಲ; ಈ ಸಂದರ್ಭದಲ್ಲಿ ನನ್ನ ಏರ್ಪಾಟಿನಲ್ಲಿ ಸ್ವಲ್ಪ ಬದಲಾವಣೆ ಮಾಡಿದೆ. ಸಾಧಾರಣ ಲೂಟಿ—ದರೋಡೆಗಳನ್ನು ಮಾಡುತ್ತ—ಅವುಗಳಿಂದ ದೊರೆತದ್ದನ್ನು—ಅನ್ಯಾಯಮಾಡಲ್ಪಟ್ಟವರ ರಕ್ಷಣೆಗೂ—ಉಪಯೋಗಕ್ಕೂ ವಿನಿಯೋಗಿಸುವ ಯೋಚನೆ ಮಾಡಿದೆ ಈ ರೀತಿ ಮಾಡುವುದರಲ್ಲಿ ಸ್ವಲ್ಪ ನ್ಯಾಯವಿದೆ—ಎಂದು ಆ ಸಮಯದಲ್ಲಿ ಭಾವಿಸಿದೆ. ನಾನೊಬ್ಬ ಸಮುದ್ರದ ಸುಂಕ-ವಸೂಲಿಗ—ಎಂದು ತಮಾಷೆಯಾಗಿ ನನಗೆ ನಾನೇ ಹೇಳಿಕೊಂಡೆ. ಒಂದು ದಿನ ನನ್ನ ಜನರನ್ನೆಲ್ಲಾ ಹಡಗಿನ

ಡೆಕ್ಕಿನ ಮೇಲೆ ಸೇರಿಸಿ—ಅವರಿಗೆ ನನ್ನ ಅಭಿಪ್ರಾಯವನ್ನು ವಿವರಿಸಿದೆ. ಕಡಲ್ಗಳ್ಳರ ಹೆಸರೂ—ಅವರ ಕೃತ್ಯಗಳೂ ನನಗೆ ಬಹಳ ಅಸಹ್ಯವೆಂದೂ—ಮುಚ್ಚು, ಮರೆ, ಮೋಸಗಳಿಲ್ಲದೆ ಮತ್ತು ನ್ಯಾಯವಾದ ಸಂದರ್ಭಗಳಲ್ಲಿ ಹೊರತು— ಉಳಿದಂತೆ ಅವರು ಮನುಷ್ಯರಕ್ತವನ್ನು ಚೆಲ್ಲಾಡುವುದಿಲ್ಲವೆಂದು ಒಪ್ಪಿದರೆ ಮಾತ್ರ, ನಾನು ಅವರ ಮುಖಂಡನಾಗಿರಲು ಒಪ್ಪುವುದಾಗಿಯೂ ಹೇಳಿದೆ.

"ನನ್ನ ಅಭಿಪ್ರಾಯ ಅವರಿಗೆಲ್ಲ ಹಿಡಿಯಿತು. ಅವರ ಮಧ್ಯೆ, ನಾನು ಸ್ಕೂನರನ್ನು ವಶಪಡಿಸಿಕೊಂಡದ್ದನ್ನು ಪೂರ್ತಿ ಮನಸ್ಸಿನಿಂದ ಒಪ್ಪದೆ ಇದ್ದ—ಮತ್ತು ನಾನು ಬಿಟ್ಟು ಕೊಟ್ಟಿದ್ದರೆ, ಹಡಗನ್ನು ಬಿಟ್ಟು ಹೋಗಲು ಸಿದ್ಧರಾಗಿದ್ದ ಜನ ಕೆಲವರಿದ್ದರು. ನನ್ನ ಮಾತುಗಳನ್ನು ಕೇಳಿ ಅವರಿಗೆಲ್ಲ ಏನೋ ಭಾರ ಇಳಿಸಿದಹಾಗಾಯಿತು. ನಾವು ದರೋಡೆ-ಲೂಟಿ ಮಾತ್ರ ಮಾಡತಕ್ಕದೆಂದೂ–ಕೊಲೆ ಮಾಡಲೇ ಕೂಡದೆಂದೂ ತೀರ್ಮಾನವಾಯಿತು. ಆಹಾ! ನಾನೆಂಥ ಬುದ್ಧಿ ಇಲ್ಲದ ಮನುಷ್ಯನಾಗಿದ್ದೆ! ಕೆಟ್ಟ ಮಾರ್ಗದಲ್ಲಿ ಕಾಲಿಡುವುದೆಂದರೆ ಬೆಟ್ಟದಿಂದ ಉರುಳಿದ ಹಾಗೆ—ಎನ್ನುವುದನ್ನು ಅರಿಯದೆ, 'ಇಷ್ಟೇ ಸಾಕು—ಇನ್ನು ಮುಂದೆ ಕೂಡದು' ಎಂದರೆ, ನನ್ನ ಅಪ್ಪಣೆ ಪ್ರಕಾರ ಎಲ್ಲಾ ನಡೆಯುತ್ತದೆ—ಎಂದು ಭಾವಿಸಿದ್ದೆ. ಆ ಸಮಯದಲ್ಲಿ, ನಾನು ಧುಮುಕಿದ್ದ ಘೋರ ಪ್ರವಾಹದ ಶಕ್ತಿಯ ಅರಿವೇ ನನಗೆ ಇರಲಿಲ್ಲ.

"ಆದರೆ, ನಾವು ನಮ್ಮ ಧ್ಯೇಯವನ್ನು ಬಿಟ್ಟು ಕದಲಲಿಲ್ಲ. ನಾವು ಯಾವಾಗಲೂ ಕೊಲೆ ಮಾಡಲಿಲ್ಲ. ನಮಗೆ ಸಿಕ್ಕಿಬಿದ್ದ ಯಾವ ಹಡಗೇ ಆಗಲಿ, ನಮ್ಮನ್ನು ಕಂಡ ಕೂಡಲೆ ಬಾವುಟ ಇಳಿಸಿ ಬಿಡುತ್ತಿದ್ದ ಕಾರಣ ರಕ್ತಪಾತವಾಗುವ ಅವಕಾಶವೇ ಇರುತ್ತಿರಲಿಲ್ಲ. ಒಂದು ಸಲವೂ ಎದುರಿಗೇ — ನ್ಯಾಯವಾದ ಹೊಡೆದಾಟ ಕೂಡ ಸಂಭವವಿಸಲಿಲ್ಲ. ನಂಬುವುದಿಲ್ಲವೇ ಮೇರೀ?"

—ಎಂದು ಹೇಳಿ, ಸ್ವಲ್ಪ ನಿಲ್ಲಿಸಿದ—ಗ್ಯಾಸ್ಕೋಯಿನ್. ವಿಧವೆ ಇನ್ನೂ ಮೌನವಾಗೇ ಇದ್ದಳು; ಆದರೆ ತಲೆಯನ್ನು ಮಾತ್ರ ಸ್ವಲ್ಪ ಒಂದು ಕಡೆಗೆ ಓರೆ ಮಾಡಿದಳು. ಅಷ್ಟರಿಂದಲೇ ತೃಪ್ತನಾದ ಕಡಲ್ಗಳ್ಳ, ಮಾತು ಮುಂದುವರಿಸುವುದರಲ್ಲಿದ್ದ. ಆಗ ಮೇಸನ್,

"ಗ್ಯಾಸ್ಕೋಯಿನ್, ಲೂಟಿ-ದರೋಡೆಗೋಸ್ಕರ ಮಾಡುವ ಕದನವನ್ನ 'ನ್ಯಾಯವಾದ ಮತ್ತು ಮುಚ್ಚುಮರೆಯಿಲ್ಲದ ಜಗಳ' ಎಂದು ನೀನು ಕರೆಯುತ್ತೀಯಾ?"—ಎಂದು ಕೇಳಿದ.

"ಇಲ್ಲ—ನಾನು ಹಾಗೆ ಕರೆಯುವುದಿಲ್ಲ. ಆದರೂ ಈ ಪ್ರಪಂಚದಲ್ಲಿ, ಅದೇ ಉದ್ದೇಶದಿಂದ, ಒಟ್ಟೊಟ್ಟಿಗೆ, ಲೆಕ್ಕವಿಲ್ಲದಷ್ಟು ಕೊಲೆಗಳನ್ನು ಮಾಡಿ, ರಕ್ತದ ಕೋಡಿ ಹರಿಸಿರುವ ದೊಡ್ಡ ದೊಡ್ಡ ಸೇನಾನಾಯಕರೂ ನೌಕಾ ನಾಯಕರೂ ಆಗಿಹೋಗಿದ್ದಾರೆ; ಅವರ ಹೆಸರುಗಳು ಕೀರ್ತಿಶಿಖರದ ತುದಿಯಲ್ಲಿ ಇಂದಿಗೂ ಬೆಳಗುತ್ತಿವೆ!"

ಈ ಮಾತುಗಳನ್ನಾಡುವಾಗ ಕಡಲ್ಗಳ್ಳನ ಮುಖದ ಮೇಲೆ ಒಂದು ಧಿಕ್ಕಾರಭಾವ, ಕ್ಷಣಕಾಲ ಕಾಣಿಸಿಕೊಂಡು ಮಾಯವಾಯಿತು. ಮುಂದುವರಿಯುತ್ತ:

"ನೋಡಿ, ನೀವೇ ಕಂಡಹಾಗೆ, ನನ್ನ ಆಯುಧಗಳನ್ನೆಲ್ಲ ಎಸೆದು ಇಲ್ಲಿ ಅರಕ್ಷಿತನಾಗಿ ನಿಮ್ಮ ಮುಂದಿದ್ದೇನೆ. ಆದರೆ ನಾನು ಕರುಣೆ ಬೇಡಲು ಇಲ್ಲಿಗೆ ಬಂದಿಲ್ಲ. ನಾನು ನಿಮಗೆ ಮಾಡಿರುವ ಪಾಪಕ್ಕೆ ತಕ್ಕ ತಪ್ಪುಗಾಣಿಕೆಯನ್ನು ಸಲ್ಲಿಸಲು ಬಂದಿದ್ದೇನೆ. ಅದು ಆದನಂತರ ನೀವು ನನಗೆ ಏನುಬೇಕಾದರೂ ಮಾಡಬಹುದು. ನನಗೆ ಸಾವೇ ತಕ್ಕದ್ದಾಗಿದೆ; ಬದುಕಿರುವ ಆಸೆ ನನಗಿಲ್ಲ" ಎಂದ.

"ಓ! ಗ್ಯಾಸ್ಕೊಯಿನ್—ಹೀಗೆಲ್ಲ ಮಾತನಾಡಬೇಡ! ನೀನು ಮನುಷ್ಯರ ಮೇಲೆ ಎಷ್ಟು ಪಾಪಮಾಡಿದ್ದರೂ—ಅದು ಎಷ್ಟೇ ಅಪಾರವಾಗಿದ್ದರೂ—ನೀನು ಪ್ರಾಣಹತ್ಯೆ ಮಾಡಿಲ್ಲದೆ ಇದ್ದರೆ—ಸಾವಿಗೆ ಅರ್ಹನಲ್ಲ. ಅಲ್ಲದೆ, ಎಂಥಾ ಮಹಾ ಪಾಪಿಗೂ, ಕ್ಷಮೆಯನ್ನು ಪಡೆಯುವ ದಾರಿ ಒಂದು ಇದೆ"—ಎಂದು ಕಾತರಳಾಗಿ ನುಡಿದಳು, ಸ್ಟೂಯರ್ಟ್.

"ಮೇರಿ, ನಿನ್ನ ಮಾತಿನ ಅರ್ಥವನ್ನು ಬಲ್ಲೆ—ಚೆನ್ನಾಗಿಬಲ್ಲೆ; ಆದರೆ....ಹುಂ!....ಒಳ್ಳೇದು—ಆ ವಿಷಯಗಳನ್ನು ಮಾತನಾಡುವುದಕ್ಕೆ ಇದು ಸಮಯವೂ ಅಲ್ಲ—ಸ್ಥಳವೂ ಅಲ್ಲ. ಮಿಸ್ಟರ್ ಮೇಸನ್, ನಿಮ್ಮ ಚಿಕ್ಕ ಮಗಳು ಈಗ ಕಡಲ್ಗಳ್ಳರ ಕೈಲಿ ಸಿಕ್ಕಿಬಿದ್ದಿದ್ದಾಳೆ"

ಈ ಮಾತುಗಳನ್ನು ಕೇಳಿ ತಂದೆಯ ಹೃದಯಕ್ಕೆ ಚೂರಿ ತಿವಿದ ಹಾಗಾಯಿತು. ಮುಖದಲ್ಲಿ ಅದರ ಯಾತನೆಯನ್ನು ಪ್ರಕಟಿಸುತ್ತ,

"ಆ ವಿಷಯ ನಾನು ಬಲ್ಲೆ; ಆದರೆ, ಈಗ ಅವಳು ನಿನ್ನ ಹತೋಟಿಗೆ ಒಳಗಾಗಿಲ್ಲ-ಅಲ್ಲವೆ?"—ಎಂದ, ಮೇಸನ್.

"ಆದ್ದರಿಂದಲೇ ಹೆಚ್ಚು ವಿಷಾದವಾಗುತ್ತದೆ. ನನ್ನ ಮೊದಲನೇ ಮೇಟು ಮ್ಯಾಂಟನ್ ಬಳಿ ಇರುವುದಕ್ಕಿಂತ ನನ್ನ ಬಳಿ ಇದ್ದಿದ್ದರೆ ಅವಳು ಹೆಚ್ಚು ಸುರಕ್ಷಿತಳಾಗಿರುತ್ತಿದ್ದಳು. ಮಹಾಸಮುದ್ರಗಳ ಮೇಲೆ ಸುತ್ತಾಡುತ್ತಿರುವವರಲ್ಲಿ ಮ್ಯಾಂಟನ್ನಿನಂಥ ನೀಚನೂ, ಕೇಡಿಗನೂ, ದುರಾತ್ಮನೂ, ದ್ರೋಹಿಯೂ ಮತ್ತೊಬ್ಬನಿಲ್ಲ. ನಮ್ಮ ರೀತಿಯ—ರಕ್ತಪಾತವಿಲ್ಲದ ಲೂಟಿ-ದರೋಡೆ ಆವನಿಗೆ ತೀರ ಸಪ್ಪೆ!—ರುಚಿಸುವುದಿಲ್ಲ ಅವನು ಪಕ್ಕ ಕಡಲ್ಗಳ್ಳ. ಬಹಳ ದಿನಗಳಿಂದ ನನ್ನ ಕೊರಳು ಕತ್ತರಿಸಲು ಆಸೆ ಪಟ್ಟಿದ್ದಾನೆ ನಾನು ಈಗ ಇಲ್ಲಿ ಬಂದಿರುವುದಕ್ಕೆ ಅವನೇ ಕಾರಣ. ನಾನು ಹಡಗಿನಲ್ಲಿ ನಿದ್ದೆಮಾಡುತ್ತಿದ್ದಾಗ, ಅವನಂತೆಯೇ ಕೇಡಿಗರಾದ ಕೆಲವು ಜನ, ಅವನ ಅಪ್ಪಣೆ ಪ್ರಕಾರ ನನ್ನನ್ನು ಹಿಡಿದು, ಕೈಕಾಲು ಕಟ್ಟಿ, ಬಾಯಿಗೆ ಬಟ್ಟೆ ತುರುಕಿ, ಒಂದು ದೋಣಿಯಲ್ಲಿ ತಂದು ಈ ದ್ವೀಪದ ತೀರದ ಮೇಲೆ ಬಿಟ್ಟರು. ಮೇಟು, ಹಳೇ ದ್ವೇಷವನ್ನು ತೀರಿಸಿಕೊಳ್ಳುವುದಕ್ಕೋಸ್ಕರ ಕೂಡಲೇ ನನ್ನ ಕುತ್ತಿಗೆ ಕೊಯ್ಯಲು ಆತುರನಾಗಿದ್ದ. ಆದರೆ, ದೇವರ ದಯವೋ, ನನ್ನ ಅದೃಷ್ಟವೋ—ಅವನ ಕಡೆ ಸೇರಿಕೊಂಡ ಜನರಲ್ಲೂ, ಅವನಷ್ಟು ರಕ್ತದಾಹ ಇಲ್ಲದೆ ಇದ್ದವರು ಕೆಲವರಿದ್ದರು. ಅವರು ನನ್ನ ಕೊಲೆಗೆ ಆಕ್ಷೇಪಿಸಿದ್ದರಿಂದ, ನನ್ನನ್ನು ಜೀವಸಹಿತ—ಇಲ್ಲಿಗೆ ತಂದು ಬಿಟ್ಟು ಹೋದರು"

"ಹಾಗಾದರೆ, ಅಲೀಸಳ ಗತಿ? ಅವಳನ್ನು ನಾವು ರಕ್ಷಿಸುವುದು ಹೇಗೆ?"—ಎಂದು, ಬಹಳ ಕಳವಳದಿಂದಲೂ -ಉದ್ವೇಗದಿಂದಲೂ ಕೇಳಿದ—ಅವಳ ತಂದೆ. ಗ್ಯಾಸ್ಕೋಯಿನ್ ಕೂಡಲೆ,

"ನನ್ನ ಸಲಹೆಯಂತೆ ನಡೆಯುವುದರಿಂದ. ತೀರದ ಬಳಿ ಬೆಟ್ಟದ ಬುಡದ ಸಣ್ಣ ಕೊಲ್ಲಿಯಲ್ಲಿ ಒಂದು ಕಟರ್* ಲಂಗರು ಬಿಟ್ಟು ನಿಂತಿದೆ.

* Cutter— ಒಂದು ಸ್ತಂಭದಿಂದಲೂ ಎರಡು ಪಟಗಳಿಂದಲೂ ಕೂಡಿದ, ವೇಗವಾಗಿ ಹೋಗುವ, ಅಗಲವಲ್ಲದ ನೀಳವಾದ ದೋಣಿ

ಅದರಲ್ಲಿ ಕೆಲವು ನಂಬಿಕೆಯಾದ ಜನರನ್ನು ಕಳಿಸಿಕೊಡಿ. ಕಷ್ಟ ಮತ್ತು ಅಪಾಯ ಒದಗುವ ಸಂದರ್ಭಗಳಲ್ಲಿ "ಅವೆಂಜರು" ಹೋಗಿ ಅವಿತುಕೊಳ್ಳುವ ಒಂದು ದ್ವೀಪ ಇದೆ. ನಾನು ಅಲ್ಲಿಗೆ ದಾರಿ ತೋರಿಸುತ್ತೇನೆ.''

"ಆದರೆ, ವ್ಯಾಂಟನ್ ಅಲ್ಲಿಗೆ ಹೋಗುತ್ತಾನೆ-ಅಂತ ನಿಮಗೆ ಹೇಗೆ ಗೊತ್ತು?"—ಎಂದು—ಆಸಕ್ತಿಯಿಂದ ಕೇಳಿದ ಹೆನ್ರಿ.

"ಹೇಗೆ ಅಂದರೆ—ಅವನ ಹತ್ತಿರ ಈಗ ಮದ್ದಿನ ಪುಡಿ ಕಡಿಮೆಯಾಗಿದೆ. ನಮ್ಮ ಸಾಮಾನು—ಸಾಮಗ್ರಿ, ಆಹಾರ ಪದಾರ್ಥ, ಅಲ್ಲದೆ ನಾವು ದರೋಡೆ ಮಾಡಿ ಸಂಪಾದಿಸಿದ ಹಣದ ಬಹುಭಾಗ—ಎಲ್ಲವನ್ನೂ ಆ ದ್ವೀಪದಲ್ಲಿ ಮರಸಿ ಇಟ್ಟಿದ್ದೇವೆ."

"ಒಳ್ಳೇದು; ಯಾವ ನಂಬಿಕೆಯ ಮೇಲೆ—ನಾವೆಲ್ಲ ಪೂರ್ತಿ ನಿನ್ನ ವಶದಲ್ಲಿರಬೇಕೆಂದು ನಿರೀಕ್ಷಿಸುವೆ?" ... ಎಂದು ಮೇಸನ್ ಕೇಳಿದ.

"ಹೌದು, ನೀವು ನನ್ನನ್ನು ನಂಬಬೇಕು—ನಿಮ್ಮ ಮಗು ಸುರಕ್ಷಿತವಾಗಿ ನಿಮ್ಮ ಕೈ ಸೇರಬೇಕಾದರೆ ನೀವು ನನ್ನನ್ನು ನಂಬಲೇಬೇಕು. ಈಗ ಅವಳು ಸುರಕ್ಷಿತವಾಗಿದ್ದಾಳೆಂದು ನಾನು ಬಲ್ಲೆ. ಅಷ್ಟೇ ಅಲ್ಲ "ಅವೆಂಜರು" ನಮ್ಮ ಸಾಮಾನುಗಳನ್ನು ಬಚ್ಚಿಟ್ಟಿರುವ ಆ ದ್ವೀಪವನ್ನು ಬಿಡುವವರೆಗೂ ಅವಳು ಸುರಕ್ಷಿತವಾಗಿರುತ್ತಾಳೆ. ಅಷ್ಟರೊಳಗಾಗಿ ನಾವು ಅವಳನ್ನು ರಕ್ಷಿಸಿ ತರದೇ ಇದ್ದರೆ, ಎಂದೆಂದಿಗೂ ನೀವು ಅವಳನ್ನು ಕಳೆದುಕೊಂಡಂತೆಯೇ ಸರಿ.''

"ಅಮ್ಮಾ, ನಾವು ಈತನನ್ನು ನಂಬಬಹುದೇ?''

—ಎಂದು ಹೆನ್ರಿ ಕೇಳಿದ. ವಿಧವೆ ಸ್ಟ್ಯುಯರ್ಟ್,

"ನೀನು ಅವರನ್ನು ನಂಬಬಹುದು." — ಎಂದು ಉತ್ತರ ಕೊಟ್ಟಳು.

ಅವಳ ನಿಶ್ಚಿತವಾದ ಧ್ವನಿಯಿಂದ ಹೆನ್ರಿಗೆ ತೃಪ್ತಿಯಾಯಿತು. ಕಡಲ್ಗಳ್ಳನ ಕಣ್ಣುಗಳಲ್ಲಿ ಕೃತಜ್ಞತೆ ತೋರಿತು.

ಸಂಭಾಷಣೆ ಇಲ್ಲಿಗೆ ಮುಗಿಯಿತು. ಕೂಡಲೆ ಎಲ್ಲರೂ, ಅಲೀಸ

ಈ ಮಾತುಗಳನ್ನು ಕೇಳಿ ತಂದೆಯ ಹೃದಯಕ್ಕೆ ಚೂರಿ ತಿವಿದ ಹಾಗಾಯಿತು. ಮುಖದಲ್ಲಿ ಅದರ ಯಾತನೆಯನ್ನು ಪ್ರಕಟಿಸುತ್ತ,

"ಆ ವಿಷಯ ನಾನು ಬಲ್ಲೆ; ಆದರೆ, ಈಗ ಅವಳು ನಿನ್ನ ಹತೋಟಿಗೆ ಒಳಗಾಗಿಲ್ಲ-ಅಲ್ಲವೆ?"—ಎಂದ, ಮೇಸನ್.

"ಆದ್ದರಿಂದಲೇ ಹೆಚ್ಚು ವಿಷಾದವಾಗುತ್ತದೆ. ನನ್ನ ಮೊದಲನೇ ಮೇಟು ವ್ಯಾಂಟನ್ ಬಳಿ ಇರುವುದಕ್ಕಿಂತ ನನ್ನ ಬಳಿ ಇದ್ದಿದ್ದರೆ ಅವಳು ಹೆಚ್ಚು ಸುರಕ್ಷಿತಳಾಗಿರುತ್ತಿದ್ದಳು. ಮಹಾಸಮುದ್ರಗಳ ಮೇಲೆ ಸುತ್ತಾಡುತ್ತಿರುವವರಲ್ಲಿ ವ್ಯಾಂಟನ್ನಿನಂಥ ನೀಚನೂ, ಕೇಡಿಗನೂ, ದುರಾತ್ಮನೂ, ದ್ರೋಹಿಯೂ ಮತ್ತೊಬ್ಬನಿಲ್ಲ. ನಮ್ಮ ರೀತಿಯ—ರಕ್ತಪಾತವಿಲ್ಲದ ಲೂಟಿ-ದರೋಡೆ ಅವನಿಗೆ ತೀರ ಸಪ್ಪೆ!—ರುಚಿಸುವುದಿಲ್ಲ ಅವನು ಪಕ್ಕ ಕಡಲ್ಗಳ್ಳ. ಬಹಳ ದಿನಗಳಿಂದ ನನ್ನ ಕೊರಳು ಕತ್ತರಿಸಲು ಆಸೆ ಪಟ್ಟಿದ್ದಾನೆ ನಾನು ಈಗ ಇಲ್ಲಿ ಬಂದಿರುವುದಕ್ಕೆ ಅವನೇ ಕಾರಣ. ನಾನು ಹಡಗಿನಲ್ಲಿ ನಿದ್ದೆಮಾಡುತ್ತಿದ್ದಾಗ, ಅವನಂತೆಯೇ ಕೇಡಿಗರಾದ ಕೆಲವು ಜನ, ಅವನ ಅಪ್ಪಣೆ ಪ್ರಕಾರ ನನ್ನನ್ನು ಹಿಡಿದು, ಕೈಕಾಲು ಕಟ್ಟಿ, ಬಾಯಿಗೆ ಬಟ್ಟೆ ತುರುಕಿ, ಒಂದು ದೋಣಿಯಲ್ಲಿ ತಂದು ಈ ದ್ವೀಪದ ತೀರದ ಮೇಲೆ ಬಿಟ್ಟರು. ಮೇಟು, ಹಳೇ ದ್ವೇಷವನ್ನು ತೀರಿಸಿಕೊಳ್ಳುವುದಕ್ಕೋಸ್ಕರ ಕೂಡಲೇ ನನ್ನ ಕುತ್ತಿಗೆ ಕೊಯ್ಯಲು ಆತುರನಾಗಿದ್ದ. ಆದರೆ, ದೇವರ ದಯವೋ, ನನ್ನ ಅದೃಷ್ಟವೋ—ಅವನ ಕಡೆ ಸೇರಿಕೊಂಡ ಜನರಲ್ಲೂ, ಅವನಷ್ಟು ರಕ್ತದಾಹ ಇಲ್ಲದೆ ಇದ್ದವರು ಕೆಲವರಿದ್ದರು. ಅವರು ನನ್ನ ಕೊಲೆಗೆ ಆಕ್ಷೇಪಿಸಿದ್ದರಿಂದ, ನನ್ನನ್ನು ಜೀವಸಹಿತ—ಇಲ್ಲಿಗೆ ತಂದು ಬಿಟ್ಟು ಹೋದರು"

"ಹಾಗಾದರೆ, ಅಲೀಸಳ ಗತಿ? ಅವಳನ್ನು ನಾವು ರಕ್ಷಿಸುವುದು ಹೇಗೆ?"—ಎಂದು, ಬಹಳ ಕಳವಳದಿಂದಲೂ -ಉದ್ವೇಗದಿಂದಲೂ ಕೇಳಿದ—ಅವಳ ತಂದೆ. ಗ್ಯಾಸ್ಕೋಯಿನ್ ಕೂಡಲೆ,

"ನನ್ನ ಸಲಹೆಯಂತೆ ನಡೆಯುವುದರಿಂದ. ತೀರದ ಬಳಿ ಬೆಟ್ಟದ ಬುಡದ ಸಣ್ಣ ಕೊಲ್ಲಿಯಲ್ಲಿ ಒಂದು ಕಟರ್* ಲಂಗರು ಬಿಟ್ಟು ನಿಂತಿದೆ.

* Cutter— ಒಂದು ಸ್ತಂಭದಿಂದಲೂ ಎರಡು ಪಟಗಳಿಂದಲೂ ಕೂಡಿದ, ವೇಗವಾಗಿ ಹೋಗುವ, ಅಗಲವಲ್ಲದ ನೀಳವಾದ ದೋಣಿ

ಅದರಲ್ಲಿ ಕೆಲವು ನಂಬಿಕೆಯಾದ ಜನರನ್ನು ಕಳಿಸಿಕೊಡಿ. ಕಷ್ಟ ಮತ್ತು ಅಪಾಯ ಒದಗುವ ಸಂದರ್ಭಗಳಲ್ಲಿ "**ಅವೆಂಜರು**" ಹೋಗಿ ಅವಿತುಕೊಳ್ಳುವ ಒಂದು ದ್ವೀಪ ಇದೆ. ನಾನು ಅಲ್ಲಿಗೆ ದಾರಿ ತೋರಿಸುತ್ತೇನೆ.''

"ಆದರೆ, ವ್ಯಾಂಟನ್ ಅಲ್ಲಿಗೆ ಹೋಗುತ್ತಾನೆ-ಅಂತ ನಿಮಗೆ ಹೇಗೆ ಗೊತ್ತು ?"—ಎಂದು—ಆಸಕ್ತಿಯಿಂದ ಕೇಳಿದ ಹೆನ್ರಿ.

"ಹೇಗೆ ಅಂದರೆ—ಅವನ ಹತ್ತಿರ ಈಗ ಮದ್ದಿನ ಪುಡಿ ಕಡಿಮೆಯಾಗಿದೆ. ನಮ್ಮ ಸಾಮಾನು—ಸಾಮಗ್ರಿ, ಆಹಾರ ಪದಾರ್ಥ, ಅಲ್ಲದೆ ನಾವು ದರೋಡೆ ಮಾಡಿ ಸಂಪಾದಿಸಿದ ಹಣದ ಬಹುಭಾಗ—ಎಲ್ಲವನ್ನೂ ಆ ದ್ವೀಪದಲ್ಲಿ ಮರಸಿ ಇಟ್ಟಿದ್ದೇವೆ."

"ಒಳ್ಳೇದು; ಯಾವ ನಂಬಿಕೆಯ ಮೇಲೆ—ನಾವೆಲ್ಲ ಪೂರ್ತಿ ನಿನ್ನ ವಶದಲ್ಲಿರಬೇಕೆಂದು ನಿರೀಕ್ಷಿಸುವೆ ?" ... ಎಂದು ಮೋಸಸ್ ಕೇಳಿದ.

"ಹೌದು, ನೀವು ನನ್ನನ್ನು ನಂಬಬೇಕು—ನಿಮ್ಮ ಮಗು ಸುರಕ್ಷಿತವಾಗಿ ನಿಮ್ಮ ಕೈ ಸೇರಬೇಕಾದರೆ ನೀವು ನನ್ನನ್ನು ನಂಬಲೇಬೇಕು. ಈಗ ಅವಳು ಸುರಕ್ಷಿತವಾಗಿದ್ದಾಳೆಂದು ನಾನು ಬಲ್ಲೆ. ಅಷ್ಟೇ ಅಲ್ಲ "**ಅವೆಂಜರು**" ನಮ್ಮ ಸಾಮಾನುಗಳನ್ನು ಬಚ್ಚಿಟ್ಟಿರುವ ಆ ದ್ವೀಪವನ್ನು ಬಿಡುವವರೆಗೂ ಅವಳು ಸುರಕ್ಷಿತವಾಗಿರುತ್ತಾಳೆ. ಅಷ್ಟರೊಳಗಾಗಿ ನಾವು ಅವಳನ್ನು ರಕ್ಷಿಸಿ ತರದೇ ಇದ್ದರೆ, ಎಂದೆಂದಿಗೂ ನೀವು ಅವಳನ್ನು ಕಳೆದುಕೊಂಡಂತೆಯೇ ಸರಿ.''

"ಅಮ್ಮಾ, ನಾವು ಈತನನ್ನು ನಂಬಬಹುದೇ ?''

—ಎಂದು ಹೆನ್ರಿ ಕೇಳಿದ. ವಿಧವೆ ಸ್ಟ್ಯೂಯರ್ಟ್,

"ನೀನು ಅವರನ್ನು ನಂಬಬಹುದು." — ಎಂದು ಉತ್ತರ ಕೊಟ್ಟಳು.

ಅವಳ ನಿಶ್ಚಿತವಾದ ಧ್ವನಿಯಿಂದ ಹೆನ್ರಿಗೆ ತೃಪ್ತಿಯಾಯಿತು. ಕಡಲ್ಗಳ್ಳನ ಕಣ್ಣುಗಳಲ್ಲಿ ಕೃತಜ್ಞತೆ ತೋರಿತು.

ಸಂಭಾಷಣೆ ಇಲ್ಲಿಗೆ ಮುಗಿಯಿತು. ಕೂಡಲೆ ಎಲ್ಲರೂ, ಅಲೀಸ

ಳನ್ನೂ ಅವಳ ಜೊತೆಯಲ್ಲಿದ್ದ ಕಾರಿ ಮತ್ತು ಫೂಪಿಯರನ್ನೂ, ಕಡಲ್ಗಳ್ಳರ ಕೈಯಿಂದ ರಕ್ಷಿಸುವ ಯೋಜನೆಯ ವಿವರಗಳನ್ನು ಚರ್ಚಿಸಿ ಇತ್ಯರ್ಥ ಮಾಡಿದರು. ಅವುಗಳನ್ನು ಕಾರ್ಯರೂಪಕ್ಕೆ ತರಲು, ಹೆನ್ರಿ ಎದ್ದ; ಹೋಗಿ ಕೊಠಡಿಯ ಬಾಗಿಲು ತೆಗೆಯುವುದರಲ್ಲಿದ್ದ; ಅಷ್ಟರಲ್ಲೇ ಹೊರಗಿನಿಂದ ಯಾರೋ ಬಾಗಿಲು ತಳ್ಳಿದ ಹಾಗಾಯಿತು. ಹೆನ್ರಿ ಒಂದು ಹೆಜ್ಜೆ ಹಿಂದಕ್ಕೆ ಸರಿದು ನಿಂತ. ಬಾಗಿಲು ದೊಡ್ಡದಾಗಿ ತೆರೆಯಿತು; ಎದುರಿಗೆ ಹ್ಯೂ ಬಾರನ್ಸ್ ನಿಂತಿದ್ದ. ಇವನು ಬೆಸ್ತರ ದೋಣಿ— ಹಡಗುಗಳಿಗೆ, ತೀರದಿಂದ ಕಳ್ಳಸಾರಾಯಿ ಒಯ್ದು ಮಾರುವ ವ್ಯಾಪಾರದಲ್ಲಿದ. ಅವನು ಹೆನ್ರಿಯನ್ನು ಕಂಡ ಕೂಡಲೆ,

"ಸಮಾಚಾರ ಕೇಳಿದೆಯಾ, ಹೆನ್ರಿ?........ಹಲೋ!"

—ಎಂದು, ಇದ್ದಕ್ಕಿದ್ದ ಹಾಗೇ ಮಾತು ನಿಲ್ಲಿಸಿದ. ಬಾಗಿಲು ತೆರೆಯುತ್ತಿದ್ದ ಹಾಗೆಯೇ ಗ್ಯಾಸ್ಕೋಯಿನ್, ನಿಶ್ಶಬ್ದವಾಗಿ ಎದ್ದು, ಬಾಗಿಲ ಕಡೆ ಬೆನ್ನು ತಿರುಗಿಸಿಕೊಂಡು, ಮನೆಯ ಒಳ ಕೊಠಡಿಯೊಂದನ್ನು ಪ್ರವೇಶಿಸಿ, ಬಾಗಿಲು ಎಳೆದುಕೊಂಡ. ಅವನನ್ನು ಕಂಡೇ ಹ್ಯೂ ಬಾರನ್ಸ್ ಆಶ್ಚರ್ಯದಿಂದ "ಹಲ್ಲೋ!" ಎಂದದ್ದು.

"ಇಲ್ಲಿ ನೋಡು, ಹೆನ್ರಿ, ಆ ದೊಡ್ಡ ಆಳು ಯಾರು!"

—ಎಂದು, ಗ್ಯಾಸ್ಕೋಯಿನ್ ಪ್ರವೇಶಿಸಿದ ಕೊಠಡಿಯ ಕಡೆ ಅನುಮಾನ ದೃಷ್ಟಿಯಿಂದ ನೋಡುತ್ತ, ಕೇಳಿದ—ಬಾರನ್ಸ್. ಮಿಸೆಸ್ ಸ್ಟೂಯರ್ಟ್—ಬೇಗನೆ ಎದ್ದು — ಅವನನ್ನು ಸ್ವಾಗತಿಸುತ್ತ,

"ಅವನು ನನ್ನ ಒಬ್ಬ ಸ್ನೇಹಿತ"—ಎಂದಳು. ಬಾರನ್ಸ್ ಕುರ್ಚಿಯಮೇಲೆ ಕುಳಿತುಕೊಳ್ಳುತ್ತ,

"ಹುಂಫ್! ಅವನು ಸ್ನೇಹಿತನಾಗಿರೋದೇ ಒಳ್ಳೇದು! ನನಗಂತೂ ಅವನು ಶತ್ರುವಾಗಿರೋದು—ಬೇಡ ಅನ್ನಿಸುತ್ತೆ!"–ಎಂದ.

"ಸರಿ, ಅದೇನು ಸಮಾಚಾರ? ನೀನು ನಮಗೆ ಹೇಳೋಕೆ ಅಷ್ಟು ಆತರುವಾಗಿದ್ದೆಯಲ್ಲ"—ಎಂದು ಕೇಳಿದ, ಹೆನ್ರಿ.

"ಆ ಕಡಲ್ಗಳ್ಳ ಗ್ಯಾಸ್ಕೋಯಿನ್–ಈ ದ್ವೀಪದ ಮೇಲೆ ಯಾರೋ ಕೆಲವು ಹೆಂಗಸರ ಕಣ್ಣಿಗೆ ಬಿದ್ದನಂತೆ! ಈಗ ಅವನಿಗೋಸ್ಕರ ಒಂದು

ಭಾರೀ ಬೇಟೆನೇ ಏರ್ಪಾಟಾಗುತ್ತಾ ಇದೆ. ನೀನೂ ಬರ್ತೀಯಾ ನಮ್ಮ ಜೊತೇಲಿ ?"

"ಇಲ್ಲ—ಹ್ಯೂ; ನನಗೆ ಅದಕ್ಕಿಂತ ಬಹಳ ಮುಖ್ಯವಾದ ಮತ್ತು ತುರುತಾದ ಕೆಲಸ ಇದೆ. ಅಷ್ಟೇ ಅಲ್ಲ; ನೀನು ನಮ್ಮ ಜೊತೇಲಿ ಒಂದು ಬೇಟೆಗೆ ಬರಬೇಕು. ನೀನು ನನ್ನ ಕೂಡ ಸಣ್ಣ ಕೊಲೀಗೆ ಬಂದರೆ, ಅದರ ವಿಷಯ ಎಲ್ಲ ಹೇಳ್ತೀನಿ"

"ಒಹೋ ಬರ್ತೀನಿ ನಡಿ—ಹೋಗೋಣ"

ಹೆನ್ರಿಯೂ ಬಾರನ್ನೂ ಕೂಡಲೆ ಕುಟೀರವನ್ನು ಬಿಟ್ಟು ಹೊರಟರು. ಹೆನ್ರಿ ಅವನಿಗೆ ತಮ್ಮ ಏರ್ಪಾಟಿನ ರಹಸ್ಯವನ್ನೆಲ್ಲಾ ತಿಳಿಸಿ, ಅವನು " **ವಾಸ್ಪ್** " ಎಂಬ " ಕಟರ್ " ನ ಜನರಲ್ಲಿ ಒಬ್ಬನಾಗಲು ಒಪ್ಪಿಸಿದ. ಮಧ್ಯಾಹ್ನದ ಹೊತ್ತಿಗೆ ಎಲ್ಲವೂ ಸಿದ್ಧವಾಯಿತು. ಗ್ಯಾಸ್ಕೋಯಿನ್ ಸಂಜೆಯ ಮಬ್ಬು ಕವಿಯುವವರೆಗೂ ಕಾದಿದ್ದು, ಅನಂತರ ಓಲ್ ಥಾರ್‌ವಲ್ಡಿನೊಡನೆ ಆ ನೌಕೆಯನ್ನು ಹತ್ತಿದ.

ಈ ನೌಕೆಯಲ್ಲಿ ಹನ್ನೆರಡು ಮಂದಿ ಇದ್ದರು. ಪಾಳೆಯದವರಲ್ಲಿ ಕಡಲ್ಗಳ್ಳರ ನಾಯಕನನ್ನು ಎಂದೂ ನೋಡದೇ ಇದ್ದಂಥ ಕರಿಯರು ಮತ್ತು ಬಿಳಿಯರನ್ನೇ ಈ ಕೆಲಸಕ್ಕೆ ಆಯ್ದುಕೊಂಡಿದ್ದರು. ಮುಖ್ಯವಾಗಿ ಅವರನ್ನು, ಹೊಡೆದಾಟದಲ್ಲಿ ಗಟ್ಟಿಗರೆಂದು ಚುನಾಯಿಸಿಕೊಂಡಿದ್ದರು. ಆ ಚಿಕ್ಕ ನಾವೆಯನ್ನು ನಡೆಸಲು ಹೆನ್ರಿ ಮತ್ತು ಗ್ಯಾಸ್ಕೋಯಿನ್ ಇಬ್ಬರೇ ಸಾಕಾಗಿದ್ದರು. ಅದರಲ್ಲಿ ಭಾರಿ ಫಿರಂಗಿಗಳೇನೂ ಇರಲಿಲ್ಲ. ಆದರೆ, ಅದರಲ್ಲಿದ್ದವರೆಲ್ಲ, ಕತ್ತಿಗಳಿಂದಲೂ, ಬಂದೂಕುಗಳಿಂದಲೂ—ಪಿಸ್ತೂಲುಗಳಿಂದಲೂ ಸಜ್ಜಿತರಾಗಿದ್ದರು.

ಗಾಳಿ ಮೆಲ್ಲಗೆ ಅನುಕೂಲವಾಗಿ ಬೀಸುತ್ತಿತ್ತು. ಹವಳದ ಕಟ್ಟೆಯ ಆಚೆ, ದಿಗಂತದಲ್ಲಿ, ಅದೇ ತಾನೇ ಚಂದ್ರ ಉದಯಿಸುತ್ತ ಕೊಲ್ಲಿಯ ನೀರಿನಮೇಲೆ ಓರೆಯಾಗಿ ತನ್ನ ಬೆಳ್ಳಿ ಕಿರಣಗಳ ಮಳೆ ಸುರಿಸುತ್ತಿದ್ದ. ಆಗ "**ವಾಸ್ಪ್**" ನಿಧಾನವಾಗಿ ಲಂಗರು ಎತ್ತಿ, ಕಾರ್ನ್ಯೋನ್ಮುಖವಾಗಿ ಹೊರಟಿತು.

---

# ೧೨

## ತಾಳೇ ದ್ವೀಪ

ವಿಶಾಲವಾದ ಪೆಸಿಫಿಕ್ ಸಾಗರದಲ್ಲಿ, ವಿಶೇಷವಾಗಿ ಕಲ್ಲು-ಬಂಡೆಗಳಿಂದ ಕೂಡಿದ ಅನೇಕಾನೇಕ ದ್ವೀಪಸ್ತೋಮಗಳಿವೆ. ಅಂಥ ದ್ವೀಪ ಸ್ತೋಮ ಒಂದರಲ್ಲಿ, ಒಂದು, ತೀರ ಸಣ್ಣದಾದ ಶಿಲಾಮಯವಾದ ಹವಳದ್ವೀಪವು, ಸ್ತೋಮದ ಇತರ ದ್ವೀಪಗಳಿಂದ ಸ್ವಲ್ಪ ದೂರದಲ್ಲಿ ಪ್ರತ್ಯೇಕವಾಗಿದೆ. ಈ ದ್ವೀಪಕ್ಕೂ — ನಮ್ಮ ಕಥೆಯ ಸ್ಥಳಕ್ಕೂ ಸುಮಾರು ಐದಾರು ದಿನಗಳ ನೌಕಾ ಪ್ರಯಾಣದ ದೂರ.

ಏಕಾಂಗಿಯಾದ ಈ ಚಿಕ್ಕ ದ್ವೀಪದಲ್ಲಿ, ಸ್ಯಾಂಡೀ ಕೊಲ್ಲಿ ಪಾಳೆಯ ಇದ್ದ ದ್ವೀಪದ ಪ್ರಕೃತಿ ಸಂಪತ್ತಾಗಲಿ—ಸೌಂದರ್ಯವಾಗಲಿ ಇರಲಿಲ್ಲ. ಆದ್ದರಿಂದ ಇಲ್ಲಿಗೆ ಯಾರೂ ಆಕರ್ಷಿತರಾಗಿರಲಿಲ್ಲ.

ಈ ದ್ವೀಪ, ನಮ್ಮ ಕಡಲ್ಗಳ್ಳರ ಸಂಕೇತ ಸ್ಥಳವಾಗಿತ್ತು. ಇದನ್ನು ಅವರು ತಾಳೇ ದ್ವೀಪ ಎಂದು ಕರೆಯುತ್ತಿದ್ದರು.

ಇಲ್ಲಿ, ಹವಳದ ಗೂಡಿನಿಂದಾದ ಸಣ್ಣ ಸಣ್ಣ ಗುಡ್ಡಗಳಲ್ಲಿ ಗವಿಗಳನ್ನು ಕೊರೆದು, ಅವುಗಳಲ್ಲಿ ಗ್ಯಾಸ್ಕೋಯಿನ್, ತನ್ನ ಕಡಲ್ಗಳ್ಳ ಕಸಬಿಗೆ ಅವಶ್ಯಕವಾಗಿದ್ದ ವಸ್ತುಗಳನ್ನೂ-ಮದ್ದು ಗುಂಡು ಮುಂತಾದುವುಗಳನ್ನೂ-ಆಹಾರ ಸಾಮಗ್ರಿಗಳನ್ನೂ—ತಾನು ಕೊಳ್ಳೆ ಹೊಡೆದು ಸಂಪಾದಿಸಿದ ಹಣ ಮತ್ತು ಇತರ ಪದಾರ್ಥಗಳನ್ನೂ ಬಚ್ಚಿಡುವುದು ವಾಡಿಕೆಯಾಗಿತ್ತು. ತನ್ನ ಹಿಂದಿನ ನಾಯಕನನ್ನು—ಕೈಕಾಲು ಕಟ್ಟಿಸಿ ಹಡಗಿನಿಂದ ಹೊರದೂಡಿದ ಮೇಲೆ, ಮ್ಯಾಂಟನ್, ಖೈದಿಗಳೊಡನೆ, ವಶಪಡಿಸಿಕೊಂಡ ಹಡಗಿನಲ್ಲಿ, ಈ ಏಕಾಂತ ಸ್ಥಳಕ್ಕೆ ಬಂದ ಇದನ್ನು ಊಹಿಸಿದ್ದ ಗ್ಯಾಸ್ಕೋಯಿನ್ ಸಹ, ಇದೇ ಸ್ಥಳಕ್ಕೆ—ದಂಗೆ ಎದ್ದಿದ್ದ ತನ್ನ ಮೊದಲನೇ ಮೇಟನ್ನು ಅಟ್ಟಿಕೊಂಡು "ವಾಸ್ಪ್"ನಲ್ಲಿ ಹೊರಟ.

ತಾಳೇ ದ್ವೀಪವನ್ನು ತಲುಪಿದ ಕೂಡಲೆ ಕಡಲ್ಗಳ್ಳರು, ದ್ವೀಪದಿಂದ ತಮಗೆ ಅವಶ್ಯಕವಾಗಿದ್ದ ಸಾಮಗ್ರಿಗಳನ್ನು ಹಡಗಿಗೆ ತುಂಬಿಕೊಳ್ಳಲು ಪ್ರಾರಂಭಿಸಿದರು. ಇವರ ಸ್ಕೂನರು ಹೋಗಿ ಲಂಗರು

ಬಿಟ್ಟ ಸಮುದ್ರ ಭಾಗ, ಒಂದು ಚಿಕ್ಕ ಕೊಲ್ಲಿಯಾಗಿತ್ತು. ಇಲ್ಲಿ, ತೀರದ ಮೇಲೆ ಉದ್ದಕ್ಕೂ, ಎತ್ತರವಾದ ತಾಳೆ ಮರಗಳ ದಟ್ಟವಾದ ಸಾಲು ಬೆಳೆದಿತ್ತು. ಉನ್ನತವಾದ ಈ ಮರಗಳ ಸಾಲು ಮರೆಯಾಗಿದ್ದುದರಿಂದ, ಇವುಗಳ ಹತ್ತಿರದ ಕೊಲ್ಲಿಯಲ್ಲಿ ನಿಂತಿದ್ದ ಹಡಗಿನ ಸ್ಥಂಭಗಳು—ದ್ವೀಪದ ಆಚೆ ಪಕ್ಕಕ್ಕೆ ಕಾಣುವಂತಿರಲಿಲ್ಲ. ಇಲ್ಲಿ ಕಡಲ್ಗಳ್ಳರು, ತಮ್ಮ ಖೈದಿಗಳನ್ನು ತೀರದ ಮೇಲೆ ಒಯ್ದರು. ವ್ಯಾಂಟನ್ನಿಗೆ, ಇವರು ಎದುರಿಗೆ ಇದ್ದು, ತನ್ನ ರಹಸ್ಯಗಳನ್ನು ನೋಡಿ ತಿಳಿದುಕೊಳ್ಳುವುದು ಇಷ್ಟವಿರಲಿಲ್ಲ; ಆದ್ದರಿಂದ ಅವನು, ಅವರನ್ನು, ದ್ವೀಪದ ಆಚೆ ಪಕ್ಕದ ಒಂದು ಕೊಲ್ಲಿಯ ತೀರಕ್ಕೆ,ಕೆಲವು ಕಾವಲಿನವರ ಜೊತೆಯಲ್ಲಿ ಕಳಿಸಿದ. ಇಲ್ಲಿ ಕೊಲ್ಲಿಯ ತೀರದ ಬಂಡೆಗಳ ಮೇಲೆ—ಹಿಂದೆ ಭಾರಿಯಾಗಿಯೂ, ಸೊಗಸಾಗಿಯೂ ಇದ್ದ, ಒಂದು ಹಡಗಿನ ಭಗ್ನಾವಶೇಷಗಳು ಬಿದ್ದಿದ್ದವು. ಈಗ ಅದರ ಭಾಗಗಳೆಲ್ಲಾ ಖಂಡ ಖಂಡವಾಗಿ ಬೇರ್ಪಟ್ಟು ಹೋಗಿದ್ದವು.

ಇಲ್ಲಿ ಕಳ್ಳರು, ತೀರದ ಮೇಲೆ ಸಮುದ್ರ ತಂದು ಹಾಕಿದ್ದ ಒಂದು ಹಳೇ ಹಡಗಿನ ಪಟವನ್ನೂ-ಮರದ ತುಂಡುಗಳನ್ನೂ ಉಪಯೋಗಿಸಿ, ನೀರಿನ ಅಂಚಿಗೆ ಸಮೀಪವಾಗಿದ್ದ ಒಂದು ಸಣ್ಣ ಹಸಿರು ದಿಣ್ಣೆಯ ಮೇಲೆ, ಚಿಕ್ಕದಾಗಿ ಒಂದು ಡೇರೆ ಹಾಕಿದರು. ಇಲ್ಲಿ ಅವರು ತಮ್ಮ ಖೈದಿಗಳನ್ನು ಬಿಟ್ಟು, ಅವರಿಗೆ ಸ್ವಲ್ಪ ಬಿಸ್ಕತ್ತುಗಳನ್ನೂ. ಎರಡು ಮೂರು ದುಪ್ಪಟಿಗಳನ್ನೂ ಕೊಟ್ಟು—ವ್ಯಾಂಟನ್ ಪುನಃ ಹೇಳಿಕಳಿಸುವತನಕ ಅವರು ಅಲ್ಲೇ ಇರಬೇಕೆಂದು ಅಪ್ಪಣೆ ಮಾಡಿ ಹೋದರು. ಹೋಗುವ ಮೊದಲು, ಯಾವ ನೆವದಿಂದಲೂ ಖೈದಿಗಳು, ದ್ವೀಪವನ್ನು ದಾಟಿ–ಸ್ಕೂನರು ನಿಂತಿದ್ದ ಕೊಲ್ಲಿಯ ಕಡೆಗೆ ಹಾದು ಬರಕೂಡದೆಂದು ಕಟ್ಟಪ್ಪಣೆಮಾಡಿ ಹೋದರು. ಅವರಲ್ಲೊಬ್ಬ, "ಹುಷಾರ್ !—ನನ್ನ ಮಾತು ಕೇಳಿ ! ಇದಕ್ಕೆ ತಪ್ಪಿಗಿಪ್ಪಿ ನೀವು ಆ ಕಡೆ ಬಂದರೆ—ನಿಮಗೆ ಭಾರಿ ತೊಂದರೆ ! ಹೇಳಿದೀನಿ ! ನಿಮ್ಮ ಕುತೂಹಲ ನಿಮ್ಮ ಜೇಬಿನಲ್ಲೇ ಇರಲಿ !"—ಎಂದು ಕಡೆಯ ಎಚ್ಚರಿಕೆ ಕೊಟ್ಟು ಹೋದ.

ಈಗ ಹುಡುಗರು ತಾವು ತಾವೇ ಆದರು. ಭಯಭ್ರಾಂತ

ರಾಗಿದ್ದ ಆ ಬಡಪಾಯಿಗಳು, ಮುಂದೇನು ಮಾಡಬೇಕೋ ತೋಚದೆ ತೊಳಲುತ್ತ ಕುಳಿತರು.

* * * * *

"ವಾಸ್ಪ್'' ಬಹಳ ವೇಗವಾಗಿ ಹೋಗುವ ನಾವೆಯಾಗಿತ್ತು. ಆದ್ದರಿಂದ, ಕಡಲ್ಗಳ್ಳರ ಸ್ಕೂನರು, ಹೆಚ್ಚುಕಡಿಮೆ ಎರಡು ದಿನಗಳು ಮುಂದಾಗಿ, ಸ್ಯಾಂಡಿಕೊಲ್ಲಿ ಪಾಳೆಯ ಇದ್ದ ದ್ವೀಪವನ್ನು ಬಿಟ್ಟು ಹೊರಟಿತ್ತಾದರೂ, ಅನುಕೂಲವಾದ ಗಾಳಿಯಲ್ಲಿ "ವಾಸ್ಪ್", ನೆರಳಿನಂತೆ ಅದನ್ನು ಹಿಂಬಾಲಿಸಿತು. "ಅವೆಂಜರು", ಹೊರಟ ಐದನೇ ದಿನ ಬೆಳಗ್ಗೆ ತಾಳೇ ದ್ವೀಪದ ಕೊಲ್ಲಿಯನ್ನು ತಲುಪಿ ಲಂಗರು ಬಿಟ್ಟಿತು. ಅದೇ ದಿನ ಸಂಜೆ ವಾಸ್ಪ್, ಆ ದ್ವೀಪ ಕಾಣುವಷ್ಟು ದೂರ ಸಮೀಪಿಸಿತು.

ಕೂಡಲೆ ಹೋಗಿ, ಮೇಲೆಬಿದ್ದು, ತನ್ನವರೇ ಆಗಿದ್ದ ಜನರೊಡನೆ ಕೈ ಕೈ ಕದನದಲ್ಲಿ, ತೊಡಗುವುದು ಗ್ಯಾಸ್ಕೋಯಿನಿನ ಉದ್ದೇಶವಾಗಿರಲಿಲ್ಲ. ಇದಕ್ಕೆ ತನ್ನ ಪಕ್ಷ ಶಕ್ತವಾಗಿರಲಿಲ್ಲವೆಂದು ಅವನಿಗೆ ಗೊತ್ತಿತ್ತು. ಆದ್ದರಿಂದ ಅವನು—ಬಲ ಸಾಲದೆ ಇದ್ದ ಈ ಸಂದರ್ಭದಲ್ಲಿ, ಯುಕ್ತಿಯಿಂದ ಕಾರ್ಯಸಾಧನೆಮಾಡುವ ಯೋಚನೆ ಮಾಡಿದ. ಆದಕಾರಣ, ದೂರದ ದಿಗಂತದಲ್ಲಿ, ತಾಳೆಮರದ ಸಾಲಿನ ತುದಿ ಕಾಣಿಸುತ್ತಿದ್ದ ಹಾಗೆಯೇ ತನ್ನ ನಾವೆಯನ್ನು ನಿಲ್ಲಿಸಿ, ಲಂಗರು ಬಿಟ್ಟು, ತನ್ನ ಕಾರ್ಯಕ್ರಮಕ್ಕೆ ಅನುಕೂಲವಾಗಿ ರಾತ್ರಿಯಾಗುವುದನ್ನೇ ಕಾಯುತ್ತಿದ್ದ.

ಪಶ್ಚಿಮದ ಕಡೆ ದಿಗಂತದಲ್ಲಿ, ಚಿನ್ನದಬಣ್ಣದ ಭಾರಿ ಮೋಡಗಳ ರಾಶಿಯ ಹಿಂದೆ, ಸೂರ್ಯ ಸಮುದ್ರಕ್ಕೆ ಇಳಿಯುತ್ತಿದ್ದ. ಮೋಡಗಳನ್ನು ನೋಡಿದರೆ ಮಳೆ, ಬಿರುಗಾಳಿಗಳ ಸೂಚನೆ ತೋರುತ್ತಿತ್ತು. ಹೆನ್ರಿ ಸ್ಟೂಯರ್ಟ್ ಹಡಗಿನ ಡೆಕ್ಕಿನಮೇಲೆ ನಿಂತು, ಈ ದೃಶ್ಯವನ್ನೇ ನೋಡುತ್ತ, ಗ್ಯಾಸ್ಕೋಯಿನನ್ನು ಕುರಿತು,

"ಈಗ ಮುಂದೆ ಏನು ಮಾಡಬೇಕೆಂದಿದ್ದೀರಿ?'' ಎಂದು ಕೇಳಿದ. ಗ್ಯಾಸ್ಕೋಯಿನ್ ಉತ್ತರವಾಗಿ,

"ರಾತ್ರಿಯಾಗುವವರೆಗೂ ಕಾದು, ಅನಂತರ ಹೋಗಿ ಸ್ಕೂನರನ್ನು ವಶಪಡಿಸಿಕೊಳ್ಳಬೇಕೆಂದಿದ್ದೇನೆ."—ಎಂದ.

ಹೆನ್ರಿ ಸಮುದ್ರಗಳ್ಳರ ನಾಯಕನ ಮುಖವನ್ನು ಆಶ್ಚರ್ಯದಿಂದ ನೋಡಿದ; ಆ ನೋಟದಲ್ಲಿ ಸ್ವಲ್ಪ ಅಪನಂಬಿಕೆಯೂ ಇತ್ತು. ಅಲ್ಲೇ, ತನ್ನ ದೊಡ್ಡ, ಜರ್ಮನ್ ತಂಬಾಕುಕೊಳವೆ ಸೇದುತ್ತಿದ್ದ ಓಲ್‌ಥಾರ್ವಲ್ಡ್ ತನ್ನ ಮನಸ್ಸಿನ ಕಳವಳವನ್ನು ಮರೆಮಾಚಿಕೊಳ್ಳದೆ ಅವನ ಕಡೆ ನೋಡುತ್ತ,

"ನಿಮ್ಮ ಕೆಲಸ ಸಾಧಿಸುವುದರಲ್ಲಿ ಏನೂ ಅನುಮಾನವಿಲ್ಲದಂತೆ ಮಾತಾಡುತ್ತಿದ್ದೀರಿ–ಮಿಸ್ಟರ್ ಗ್ಯಾಸ್ಕೋಯಿನ್"—ಎಂದ.

"ನನಗೆ ಯಾವ ಅನುಮಾನವೂ ಇಲ್ಲ"—ಎಂದ, ಗ್ಯಾಸ್ಕೋಯಿನ್.

ದ್ವೀಪಕ್ಕೆ ಬಹಳ ಹತ್ತಿರ ಬಂದಾಗ "**ವಾಸ್ಪ್**" ಬಲು ಬಿರುಸಿನಿಂದ ಒಂದು ಬಂಡೆಗೆ ಅಪ್ಪಳಿಸಿತು. ಕೂಡಲೆ, ಗ್ಯಾಸ್ಕೋಯಿನ್, ಹಡಗಿನ ದೋಣಿಯನ್ನು ನೀರಿಗೆ ಬಿಟ್ಟು, ಅದಕ್ಕೆ ಇಳಿಯುವಂತೆ ಹಡಗಿನಲ್ಲಿದ್ದವರಿಗೆ ಅಪ್ಪಣೆ ಮಾಡಿದ. ಹೆನ್ರಿ ಮಾತ್ರ, ಹಡಗಿನ ಮೇಲೆ ಇದ್ದು ಅದನ್ನು ಹೇಗಾದರೂ ಮಾಡಿ ಉಳಿಸಿಕೊಳ್ಳುವುದು ತನ್ನ ಕರ್ತವ್ಯವೆಂದು ಭಾವಿಸಿ, ಹಿಂದೆಯೇ ನಿಂತ. ಉಳಿದವರೆಲ್ಲ ದೋಣಿಯನ್ನು ತೀರದ ಕಡೆಗೆ ನಡೆಸಿಕೊಂಡು ಹೋದರು.

ತೀರವನ್ನು ಮುಟ್ಟಿ, ದೋಣಿಯಿಂದ ನೆಲಕ್ಕಿಳಿದ ಕೂಡಲೆ, ಗ್ಯಾಸ್ಕೋಯಿನ್, ತನ್ನ ಕಡೆಯವರನ್ನು ದ್ವೀಪದ ಅತ್ಯುನ್ನತವಾದ ಪ್ರದೇಶಕ್ಕೆ ಕರೆದುಕೊಂಡು ಹೋಗಿ, ಅಲ್ಲಿ ಅವರು ಅವಿತುಕೊಂಡಿರುವಂತೆ ಹೇಳಿ, ತಾನೊಬ್ಬನೇ ಸ್ಥಳಾನ್ವೇಷಣ ಮಾಡಲು ಮುಂದೆ ಹೊರಟ. ರಾತ್ರಿಯ ಕತ್ತಲು ಇವರಿಗೆ ಬಹಳ ಸಹಾಯಕವಾಗಿತ್ತು. ಕೆಲವು ಗಜಗಳ ದೂರ ಕೂಡ ಕಾಣಿಸದಷ್ಟು ಕಪ್ಪಾಗಿತ್ತು, ಕತ್ತಲೆ; ಅಲ್ಲದೆ, ತಾಳೆಯ ಮರಗಳಲ್ಲಿ ತೂರಿ ತೂರಿ ಬೀಸುತ್ತಿದ್ದ ಬಲವಾದ ಗಾಳಿಯ ಅಸಾಧ್ಯ ಶಬ್ದದಲ್ಲಿ, ಇವರು ಒಂದುವೇಳೆ ಗಟ್ಟಿಯಾಗಿ ಮಾತಾಡಿದರೂ ದೂರ ಇದ್ದವರಿಗೆ ಕೇಳಿಸುವಂತಿರಲಿಲ್ಲ.

ಗ್ಯಾಸ್ಕೋಯಿನ್‌ಗೆ ಈ ದ್ವೀಪದ ಪ್ರತಿಯೊಂದು ಗಿಡ—ಮರ ಬಂಡೆಯ ಪರಿಚಯ ಚೆನ್ನಾಗಿತ್ತು. ಅವನು, ತನಗೂ, **ಫ್ಲೋಮ್** ನಿಂತಿದ್ದ ಕೊಲ್ಲಿಗೂ ಮಧ್ಯೆ ಇದ್ದ ನೀಳವಾದ ಇಳಿಜಾರಿನಲ್ಲಿ ಬೇಗ ಬೇಗ ನಡೆದು ಹೋದ. ಸ್ವಲ್ಪ ಹೊತ್ತಿನಲ್ಲೇ—ಕತ್ತಲಾಗಿದ್ದರೂ, ದೂರ, ಕೊಲ್ಲಿಯಲ್ಲಿ ನಿಂತಿದ್ದ, ತನ್ನ ಹಡಗಿನ—ಸ್ತಂಭಗಳೂ—ಅಡ್ಡ ದಿಮ್ಮಿಗಳೂ ಆಕಾಶಕ್ಕೆ ಇದಿರಾಗಿ, ಮಬ್ಬಾಗಿ ಕಾಣುತ್ತಿದ್ದುದನ್ನು ನೋಡಿದ.

ಈ ಕಡಲ್ಗಳ್ಳ, ತನ್ನ ಚಲನವಲನಗಳಲ್ಲಿ ಬಹಳ ಎಚ್ಚರಿಕೆಯಿಂದ ಇದ್ದ. ಬಹಳ ಸಿಧಾನವಾಗಿ ಹೆಜ್ಜೆ ಇಡುತ್ತ—ಅನೇಕ ಸಲ ಕಡೆದು ನಿಂತು ಆಲಿಸುತ್ತ ಮುಂದುವರಿಯತೊಡಗಿದ. ಕೊನೆಗೆ, ಅಂಬೆಗಾಲಿಕ್ಕುತ್ತ ಹಾಗೆಯೇ ತಕ್ಕಷ್ಟುದೂರ ಹರಿದು ಹೋಗಿ, ಕೊಲ್ಲಿಯ ತೀರದಲ್ಲಿ—ನೀರನ ಮೇಲೆ ಚಾಚಿಕೊಂಡಿದ್ದ ಎತ್ತರವಾದ ಬಂಡೆಗಳ ಅಂಚನ್ನು ತಲುಪಿದ. ಇಲ್ಲಿ—ಮುಂದೆ ಕೆಲವು ಗಜಗಳ ದೂರದಲ್ಲಿ—ಒಂದು ಸ್ಥಳದಲ್ಲಿ ಕಲ್ಲುಗುಂಡಿನಂಥ ಏನೋ ಪದಾರ್ಥ ಇದ್ದುದು ಇವನ ಕಣ್ಣಿಗೆ ಬಿತ್ತು. ಹಿಂದೆ, ಆ ಸ್ಥಳದಲ್ಲಿ ಅಂಥಾದ್ದೇನೂ ಇರಲಿಲ್ಲವೆಂದು ಗ್ಯಾಸ್ಕೋಯಿನಿಗೆ ಚೆನ್ನಾಗಿ ಗೊತ್ತಿತ್ತು. ಅವನು ನೋಡುತ್ತಿದ್ದ ಹಾಗೆಯೇ, ಒಂದೆರಡು ಕ್ಷಣ ಬಿಟ್ಟು, ಅದು ಸ್ವಲ್ಪ ಅಲುಗಾಡಿತು. ಈ ದ್ವೀಪದ ಮೇಲೆ ಯಾವತರದ ಕಾಡು ಪ್ರಾಣಿಯೂ ಇರಲಿಲ್ಲವೆಂದು ತಿಳಿದಿದ್ದ ಗ್ಯಾಸ್ಕೋಯಿನ್, ಅದು ಯಾರೋ ಮನುಷ್ಯನಿರಬೇಕೆಂದು ಊಹಿಸಿದ. ಕೂಡಲೆ ಅವನು ತನ್ನ ಉದ್ದವಾದ ಚಾಕುವನ್ನು ಒರೆಯಿಂದ ತೆಗೆದು, ಬಾಯಲ್ಲಿ ಕಚ್ಚಿಕೊಂಡು, ಸದ್ದುಮಾಡದೆ ಅದರ ಸಮೀಪಕ್ಕೆ ಹರಿದುಹೋಗಿ, ಇದ್ದಕ್ಕಿದ್ದ ಹಾಗೆ ಮೇಲೆಬಿದ್ದು–ಅದರ ಕೊರಳಿಗೆ ಕೈಹಾಕಿದ. ಆ ಕೊರಳು ವಿಲ್‌ಕಾರಿಯ ಕೊರಳಾಗಿತ್ತು.

ಕಾರಿ ಮಿತಿಮೀರಿದ ಭಯದಿಂದ ಅರಚಿಕೊಳ್ಳುವುದರಲ್ಲಿದ್ದ; ಆದರೆ, ಗ್ಯಾಸ್ಕೋಯಿನ್ ಅಷ್ಟಕ್ಕೆ ಬಿಡದೆ, ಅವನನ್ನು ಬೆನ್ನಮೇಲೆ ತಿರುಗಿಸಿ, ಕತ್ತನ್ನು ಅದುಮಿ ಹಿಡಿದು, ಹುಡುಗನ ಚೀತ್ಕಾರ ಹುಟ್ಟುವ ಮೊದಲೇ ಅದರ ಹುಟ್ಟಡಗಿಸಿಬಿಟ್ಟ. ಕೂಡಲೆ ಅವನ ಗುರಿತು ಹಿಡಿದು,

ಆಶ್ಚರ್ಯದಿಂದ " ಹ್ಞಾ! ಕಾರಿ! " ಎಂದು ಉಸುರಿ, ಹಿಡಿತವನ್ನು ಸಡಿಲ ಮಾಡಿದ; ಆದರೂ ಅವನನ್ನು ಇನ್ನೂ ನೆಲಕ್ಕೆ ಒತ್ತಿ ಹಿಡಿದಿದ್ದ.

" ಹಾ ! ಕೇಡಿಗ ! ಮೋಸಗಾರ ಕಡಲ್ಗಳ್ಳ ! ಗೊತ್ತು !—ಗೊತ್ತು ! ನನಗೆ—ನನಗೆ—"

ಮತ್ತೆ ಹುಡುಗ ಮುಂದೆ ಏನು ಹೇಳುತ್ತಿದ್ದನೋ—ಅಷ್ಟರಲ್ಲೇ, ಗ್ಯಾಸ್ಕೋಯಿನ್ ಪುನಃ ಅವನ ಕೊರಳನ್ನು ಅದುಮಿ, ಅವನ ಮಾತನ್ನು ನಿಲ್ಲಿಸಿ, ತಗ್ಗಿದ ದನಿಯಲ್ಲಿ, " ಬಾ, ಮಗೂ, ನೀನು ಅಷ್ಟು ಗಟ್ಟಿಯಾಗಿ ಮಾತನಾಡಬಾರದು; ಶತ್ರುಗಳು ಹತ್ತಿರದಲ್ಲೇ ಇದ್ದಾರೆ. ನಾನು ಹೇಳಿದ ಹಾಗೆ ಕೇಳದಿದ್ದರೆ ನಿನ್ನ ಕೊರಳನ್ನು ಪೂರ್ತಿ ಹಿಸುಕ ಬೇಕಾಗುತ್ತೆ—ಜೋಕೆ ! ನಿನ್ನನ್ನೂ ನಿನ್ನ ಜೊತೆಯವರನ್ನೂ ರಕ್ಷಿಸು ವುದಕ್ಕೆ ನಾನು ಸ್ಕ್ಯಾಂಡಿಕೊಲ್ಲಿಯಿಂದ ಬಂದಿದ್ದೇನೆ. ನನ್ನ ಜೊತೆ ಯಲ್ಲಿ ಕೆಲವು ಜನ ಬಂದಿದ್ದಾರೆ"—ಎಂದು, ಪುನಃ ಹಿಡಿತವನ್ನು ಸಡಿಲಿ ಸಿದ.

" ಉಹುಂ ! ಅದೆಲ್ಲ ನಡೆಯೊಲ್ಲ ಗ್ಯಾಸ್ಕೋಯಿನ್ ! ನೀನು ನನ್ನನ್ನ ಬೇಕಾದರೆ ಕೊಂದು ಹಾಕಬಹುದು; ಆದರೆ ನಾನು ನಿನಗೆ ಬಗ್ಗೋನಲ್ಲ—ತಿಳಿಕೋ ! ನಿನೊಬ್ಬ ಹೇಡಿ ರಾಕ್ಷಸ ! ನಿನ್ನಲ್ಲಿ ನನಗೆ ಸ್ವಲ್ಪವೂ ನಂಬಿಕೆಯಿಲ್ಲ "—ಎಂದ, ಒಡಪಾಯಿ ಹುಡುಗ ಕಾರಿ.

ಕಾರಿ ಚಿಕ್ಕವನಾಗಿದ್ದರೂ ಬಹಳ ಧೈರ್ಯಶಾಲಿಯಾಗಿದ್ದ ಗ್ಯಾಸ್ಕೋಯಿನಿನ ಕೈಯಿಂದ ಬಿಡಿಸಿಕೊಳ್ಳಲು ವೀರಾವೇಶದಿಂದ ಹೋರಾಡಿದ; ಕೂಗಿಕೊಳ್ಳಲು ಪ್ರಯತ್ನಪಟ್ಟ; ಆದರೆ ಗ್ಯಾಸ್ಕೋಯಿನ್ ಪುನಃ ಅವನ ಕೊರಳನ್ನು ಅವುಕಿ—ಕೂಗಿಕೊಳ್ಳಲು ಅವಕಾಶ ಕೊಡ ಲಿಲ್ಲ. ಕಚ್ಚುವುದಕ್ಕೆ ಪ್ರಯತ್ನಪಟ್ಟ; ಅದೂ ಸಾಧ್ಯವಾಗಲಿಲ್ಲ. ಒದೆ ಯುವುದಕ್ಕೂ-ಹೊಡೆಯುವುದಕ್ಕೂ ಪ್ರಯತ್ನಪಟ್ಟ; ಆದರೆ ಗ್ಯಾಸ್ಕೋ ಯಿನ್-ಅದೊಂದಕ್ಕೂ ಆಸ್ಪದವಿಲ್ಲದಂತೆ ಅವನನ್ನು ತನ್ನ ಎಡ ತೋಳಿ ನಲ್ಲಿ ಬಾಚಿ ಬಿಗಿಯಾಗಿ ತಬ್ಬಿ ಹಿಡಿದಿದ್ದ. ಆದರೂ ಹುಡುಗ ಬಿಡು ವಿಲ್ಲದೆ ಹೊಸೆಗಾಡುತ್ತಲೇ ಇದ್ದ. ಆಗ ಇದ್ದಕ್ಕಿದ್ದ ಹಾಗೆಯೇ, ಗ್ಯಾಸ್ಕೋಯಿನ್ ಹುಡುಗನನ್ನು ಹಿಡಿದು ಎತ್ತಿ, ಆ ಸಮಯಕ್ಕೆ ಸರಿ

ಯಾಗಿ ಅಲ್ಲಿಗೆ ಬಂದು ಆಶ್ಚರ್ಯದಿಂದ ನೋಡುತ್ತಿದ್ದ ಫ್ರೆಡೆರಿಕ್ ಮೇಸನ್ ಮತ್ತು ಓಲ್ ಥಾರ್‌ವಲ್ಡ್-ರ ಮುಂದೆ ನಿಲ್ಲಿಸಿದ.

ಆಗ ಅಲ್ಲಿ ಸೇರಿದ್ದವರಿಗೆಲ್ಲ ಎಷ್ಟು ಆಶ್ಚರ್ಯವಾಯಿತೆಂದು ವರ್ಣಿಸುವುದು ಅನಾವಶ್ಯಕ. ಅಲೀಸಳು ಸುರಕ್ಷಿತಳಾಗಿದ್ದಾಳೆಂದೂ-ತಾವಿದ್ದ ಸ್ಥಳದಿಂದ ಕೇವಲ ಐದು ನಿಮಿಷಗಳ ನಡೆಯ ದೂರದಲ್ಲೇ ಇದ್ದಾಳೆಂದೂ ತಿಳಿದು, ತಂದೆಯಾದ ಮೇಸನ್‌ಗೆ ಎಷ್ಟು ಸಂತೋಷವಾಯಿತೋ ಅದನ್ನು ಊಹೆಗೆ ಬಿಡುವುದೇ ಮೇಲು. ಈಗ ಕಾರಿಗೆ, ಗ್ಯಾಸ್ಕೋಯಿನಿನ ಒಳ್ಳೆ ನಡತೆಯ ವಿಚಾರದಲ್ಲಿ ಪೂರ್ಣ ನಂಬಿಕೆಯಾಯಿತು. ಕೂಡಲೆ ಹುಡುಗ ಅವನನ್ನೂ—ಮಿಶನರಿಯನ್ನೂ ಕರೆದುಕೊಂಡು ಅಲೀಸ್ ಮತ್ತು ಪೂಪಿ ಇದ್ದ ಡೇರೆಯ ಬಳಿಗೆ ಹೋದ. ಉಳಿದವರೊಡನೆ ಥಾರ್‌ವಲ್ಡ್ ಹಿಂದೆಯೇ ನಿಂತು ಮುಂದಿನ ಅಪ್ಪಣೆಯನ್ನು ಕಾಯುತ್ತಿದ್ದ.

ತಂದೆಯನ್ನು ಕಂಡ ಕೂಡಲೆ ಅಲೀಸಳು ಸಂತೋಷಾತಿಶಯದಿಂದ ಕೂಗುತ್ತ, ನೆಗದು ತಂದೆಯ ಪ್ರಿಯವಾದ ತೋಳುಗಳಲ್ಲಿ ಸೆರೆಯಾದಳು. ದೈವವಶಾತ್ ಗಾಳಿ, ಸ್ಕೂನರು ನಿಂತಿದ್ದ ಕೊಲ್ಲಿಯ ಪಕ್ಕದಿಂದ-ದ್ವೀಪದ ಆಚೆ ಪಕ್ಕದ ಕಡೆ ಬೀಸುತ್ತಿದ್ದುದರಿಂದ ಹುಡುಗಿ ಕೂಗಿಕೊಂಡದ್ದು—ಹಡಗಿನಲ್ಲಿದ್ದ ಕಳ್ಳರಿಗೆ ಕೇಳಿಸುವಂತಿರಲಿಲ್ಲ. ಇಲ್ಲದೇ ಇದ್ದರೆ, ಗ್ಯಾಸ್ಕೋಯಿನಿನ ಏರ್ಪಾಟೆಲ್ಲ ಹಾಳಾಗಿ ಹೋಗುತ್ತಿತ್ತು.

ಹುಡುಗಿಯರ ರಕ್ಷಣೆಗಾಗಿ ಮೇಸನನ್ನು ಕಾವಲಿಟ್ಟು, ಗ್ಯಾಸ್ಕೋಯಿನ್ ಕಾರಿಯೊಡನೆ, ಥಾರ್‌ವಲ್ಡ್ ಮತ್ತು ಅವನ ಜೊತೆಯವರು ಕಾದಿದ್ದ ಸ್ಥಳಕ್ಕೆ ವಾಪಸು ಬಂದ. ಕೂಡಲೆ ನಿಧಾನವಾಗಿ ತನ್ನ ಷರಟನ್ನು ಕಳಚಿ ತೆಗೆದ. ಅವನ ವಿಶಾಲವಾದ ಉಬ್ಬಿದ ಎದೆ, ಬಲವಾದ ಬೆನ್ನು—ಮಾಂಸಖಂಡಗಳಿಂದ ತುಂಬಿದ ಗದೆಯಂಥ ತೋಳುಗಳನ್ನು ನೋಡಿದರೆ, ಗ್ರೀಕರ ಮಲ್ಲ ಹರ್ಕ್ಯುಲೀಸಿಗೂ ಅಸೂಯೆಯಾಗುವಂತೆ ಇದ್ದವು. ಕಾಲಿನ ಬೂಟ್ಸುಗಳನ್ನು ಕಳಚಿ ತೆಗೆದು, ಕೇವಲ ಚಲ್ಲಣವನ್ನು ಮಾತ್ರ ಉಳಿಸಿಕೊಂಡು ನಿಂತು, ಅವನು ಕಾರಿಯನ್ನು ಕುರಿತು,

"ಮಗೂ ನಿನಗೆ ಈಜೋಕೆ ಬರುತ್ತೆಯೇ? ''—ಎಂದು ಕೇಳಿದ.

" ಓಹೋ ! ಬಾತಿಗಿಂತ ಚೆನ್ನಾಗಿ ! ''

"ಸ್ಕೂನರಿನ ಬಾಲದ ಕಡೆ ಯಾವುದು ಪತ್ತೆ ಮಾಡಬಲ್ಲೆಯಾ?"

" ಓಹೋ, ಮಾಡಬಲ್ಲೆ ''

" ಸರಿ ಹಾಗಾದರೆ, ಕೇಳು ಅದರ ಹಿಂಭಾಗದ ತುದಿಯಮೇಲೆ ಒಂದು ಬಿಳೀ ಬಟ್ಟೆ ಬಾವುಟದ ಹಾಗೆ ಆಡಿಸಿದ್ದನ್ನ ಕಂಡಕೂಡಲೆ, ಅಂಗಿ-ಷರಟು ತೆಗೆದುಹಾಕಿ, ಅದರ ಕಡೆ ಈಜಿಕೊಂಡು ಹೋಗು—ಗೊತ್ತಾಯಿತೇ ? "

" ಚೆನ್ನಾಗಿ ''

ಹುಡುಗ ಈಗ ಬಹಳ ಉತ್ಸುಕನಾಗಿದ್ದ ಗ್ಯಾಸ್ಕೋಯಿನ್, ಥಾರ್‌ವಲ್ಡನ್ನು ಕುರಿತು,

''ಮಿ|| ಥಾರ್‌ವಲ್ಡ್, ಈಗ ನಾನು ಆ ಸ್ಕೂನರಿಗೆ ಈಜಿಕೊಂಡು ಹೋಗುತ್ತೇನೆ. ತೀರದ ಮೇಲೆ ಒಂದು ಸ್ಥಳ ಇದೆ—ಅದು ಎಲ್ಲಿ—ಏನು ಅಂತ ನೀವೇನು ತಿಳಿದುಕೋಬೇಕಾಗಿಲ್ಲ. ನನ್ನ ನಿರೀಕ್ಷಣೆ ಪ್ರಕಾರ ಹಡಗಿನ ಜನರೆಲ್ಲ ತೀರದಮೇಲೆ ಆ ಸ್ಥಳಕ್ಕೆ ಹೋಗಿದ್ದರೆ—ಒಳ್ಳೇದು; ಅನುಕೂಲವೇ ಆಗುತ್ತೆ. ಆಗ ನಾನು ನಿಮಗೆ, ಶಬ್ದ ಆಗದ ಹಾಗೆ ಹುಟ್ಟುಗಳಿಗೆ ಬಟ್ಟೆ ಸುತ್ತಿಸಿ, ಒಂದು ದೋಣಿ ಕಳಿಸುತ್ತೇನೆ. ಆದರೆ, ಎಚ್ಚರಿಕೆ!—ದೋಣಿಯಲ್ಲಿ ಹೊರಡುವಾಗಲೂ—ಹಡಗನ್ನು ತಲುಪಿ ಅದರ ಮೇಲೆ ಹತ್ತುವಾಗಲೂ ಸ್ವಲ್ಪವೂ ಶಬ್ದವಾಗಕೂಡದು—ಗೊತ್ತಾಯಿತೆ? ಹಾಗಲ್ಲದೆ ಜನ ಹಡಗಿನಮೇಲೇ ಇದ್ದರೆ, ನಾನೇ ಇಲ್ಲಿಗೆ ಒಂದು ದೋಣಿ ತರುತ್ತೇನೆ. ಆಗ ಅಷ್ಟು ನಿಶ್ಯಬ್ದವಾಗಿರ ಬೇಕಾದ ಅವಶ್ಯಕತೆ ಇರೋದಿಲ್ಲ; ಕದನದಲ್ಲಿ ನಿಮ್ಮ ಬಲದ ಪರೀಕ್ಷೆ ಯಾಗುತ್ತದೆ."—ಎಂದು ಹೇಳಿ, ಉತ್ತರಕ್ಕೆ ಕಾಯದೆ, ನಿಧಾನವಾಗಿ ನಡೆದು ನೀರಿಗಿಳಿದು ಕತ್ತಲೆಯಲ್ಲಿ ಮಾಯವಾದ. ಅವನು ಬಹಳ ಎಚ್ಚರಿಕೆಯಿಂದ ನಿಶ್ಯಬ್ದವಾಗಿ ಈಜುತ್ತ, ತೀರದಿಂದ ಕ್ಷಣಕ್ಷಣಕ್ಕೆ ದೂರವಾಗುತ್ತ ಹೊರಟ.

ಹೊರಗಿನ ಸಮುದ್ರದಲ್ಲಿ, ಬಿರುಗಾಳಿ ಎದ್ದು ರಭಸದಿಂದ ಬೀಸು

ತ್ತಿದ್ದರೂ, ನೆಲದಿಂದ ರಕ್ಷಿತವಾಗಿ ಮರೆಯಲ್ಲಿದ್ದ ಕೊಲ್ಲಿಯಲ್ಲಿ, ನೀರು ಶಾಂತವಾಗಿತ್ತು. ಆದ್ದರಿಂದ ಗ್ಯಾಸ್ಕೋಯಿನಿಗೆ — ನಿಶ್ಶಬ್ದವಾಗಿ ಈಜುತ್ತ ಹಡಗಿನ ಹತ್ತಿರ ಹೋಗುವುದು ಕಷ್ಟವಾಗಲಿಲ್ಲ. ಅವನು ಹಡಗಿನ ಪಕ್ಕಕ್ಕೆ ಹೋದಾಗ, ಅದರ ಡೆಕ್ಕಿನ ಮೇಲೆ ಕಾಲು ಸಪ್ಪಳ ಕೇಳಿಸಿತು. ಕಾವಲಿಗೆ ಒಬ್ಬನನ್ನಾದರೂ ಬಿಟ್ಟು ಹೋಗಿದ್ದಾರೆ —ಎಂದು ಅವನಿಗೆ ಗೊತ್ತಾಯಿತು. ಕೆಲವು ಕ್ಷಣಗಳ ತರುವಾಯ, ಗ್ಯಾಸ್ಕೋಯಿನ್ ಸಮೀಪಿಸಿದ್ದ ಪಕ್ಕದಲ್ಲಿ ಹಡಗಿನಮೇಲೆ, ಒಬ್ಬ ಮನುಷ್ಯ, ಡೆಕ್ಕಿನ ಮೋಟು ಕಟಕಟೆಯನ್ನು ಹಿಡಿದು ಮುಂದಕ್ಕೆ ಬಾಗಿ, "ಹಾ! ಅದೇನೋ—ಮೃಗ?" ಎಂದು ಕೂಗಿ, ಅಲ್ಲೇ ಬಿದ್ದಿದ್ದ ಒಂದು ಕೈಸಲಾಕಿಯನ್ನು ತೆಗೆದುಕೊಂಡು, ತಾನು ಕಂಡ ಮೃಗದ ತಲೆಗೆ ಗುರಿ ಇಟ್ಟು ಎಸೆದ. ಸಲಾಕಿ ಗ್ಯಾಸ್ಕೋಯಿನಿಂದ ಒಂದು ಗಜ ದೂರದಲ್ಲಿ ಬಿತ್ತು. ಅವನು, ನಿಜವಾಗಿಯೂ ತಾನು ಯಾವುದೋ ಸಮುದ್ರ ಮೃಗ ಎಂದು ಭ್ರಮೆ ಹುಟ್ಟುವ ತೆರದಲ್ಲಿ–ತನ್ನ ಕೈಗಳಿಂದ ನೀರನ್ನು ಬಲವಾಗಿ ಅಪ್ಪಳಿಸಿ—ನೀರಿನಲ್ಲಿ ಮುಳುಗಿದ. ನೀರಿನ ಒಳಗೇ, ತನ್ನ ಶಕ್ತಿಯನ್ನೆಲ್ಲಾ ಬಿಟ್ಟು ಈಜುತ್ತ, ಹಡಗಿನ ಆಚೆ ಪಕ್ಕಕ್ಕೆ ಹೋಗಲು ಪ್ರಯತ್ನ ಪಟ್ಟ. ಆದರೆ ಸಾಧ್ಯವಾಗದಿರಲು, ನೀರಿನಲ್ಲೇ ಮುಖ ಮೇಲೆ ಮಾಡಿ ತಿರುಗಿ, ನಿಧಾನವಾಗಿ ಮೇಲಕ್ಕೆ ತೇಲಿ, ತನ್ನ ಮುಖ ಅಷ್ಟೇ ಮೇಲೆ ಕಾಣುವ ಹಾಗೆ ಮಾಡಿಕೊಂಡು —ಉಸಿರು ಎಳೆದುಕೊಂಡು, ಪುನಃ ನೀರಿನಲ್ಲಿ ಮುಳುಗಿ, ಹಡಗಿನ ಪಕ್ಕಕ್ಕೆ ಹೋಗಿ ನೀರಿನ ಮಟ್ಟಕ್ಕೆ ಎದ್ದ. ಇಲ್ಲಿ ಒಂದು ನಿಮಿಷ ತಡೆದು—ಉಸಿರು ತೆಗೆದುಕೊಂಡು, ನಿಶ್ಶಬ್ದವಾಗಿ, ಹಡಗಿನ ಪಕ್ಕದಲ್ಲಿ ಇಳಿದಿದ್ದ ಲಂಗರು ಸರಪಳಿಯನ್ನು ಹಿಡಿದುಕೊಂಡು, ಸುಮಾರು ಐದು ನಿಮಿಷಗಳ ವರೆಗೆ ಆಲಿಸಿ ಕೇಳಿದ. ಡೆಕ್ಕಿನ ಮೇಲೆ ಓಡಾಡುತ್ತ —ಬೇಸರ ಕಳೆದುಕೊಳ್ಳುವುದಕ್ಕೆ ಮಧ್ಯೆ ಮಧ್ಯೆ ಏನೋ ನಾವಿಕರ ಹಾಡನ್ನು ಗುರುಗುಟ್ಟುತ್ತಿದ್ದ—ಏಕಾಂಗಿಯಾದ ಕಾವಲಿನವನ ಕಾಲು ಸಪ್ಪಳ ಹೊರತು, ಇನ್ಯಾವ ಶಬ್ದಗಳೂ ಕೇಳಿಸಲಿಲ್ಲ.

ಹಡಗಿನ ನಾವಿಕರು ತೀರದಮೇಲೆ ಹೋಗಿ—ಅಲ್ಲಿ ತಮ್ಮ

ಕೃತಕ ಗವಿಗಳೊಂದರಲ್ಲಿ ವಾಡಿಕೆಯಂತೆ ತಿಂಡಿ—ಗಿಂಡಿ ತಿನ್ನುತ್ತ—ಸಂತೋಷದಲ್ಲಿದ್ದಾರೆಂದು, ಗ್ಯಾಸ್ಕೋಯಿನಿಗೆ ಖಾತ್ರಿಯಾಯಿತು. ತನ್ನ ಹಿಂದಿನ ಅನುಭವದಿಂದ, ತಾಳೀ ದ್ವೀಪದ ಈ ಕೊಲ್ಲಿ ಬಹು ಸುರಕ್ಷಿತವಾದ ಸ್ಥಳವೆಂದು ಅವನಿಗೆ ಗೊತ್ತಿತ್ತು. ಆದ್ದರಿಂದ, ಹಡಗಿನವರೆಲ್ಲ—ಕಾವಲಿಗೆ ಒಬ್ಬನನ್ನು ಮಾತ್ರ ಇಟ್ಟು—ತೀರದಮೇಲೆ ಹೋಗುವುದು ಅಸಂಭವವೇನೂ ಆಗಿರಲಿಲ್ಲ.

ಈಗ ಗ್ಯಾಸ್ಕೋಯಿನ್, ಸರಪಳಿಯನ್ನು ಹಿಡಿದು, ನಿಧಾನವಾಗಿ ಹಡಗಿನ ಪಕ್ಕದ ಮೇಲುಮಟ್ಟದವರೆಗೂ ಹತ್ತಿಹೋಗಿ, ತಲೆ, ಕಟಕಟೆಯ ಮಟ್ಟದ ಕೆಳಗೇ ಇರುವಂತೆ ಬಾಗಿಕೊಂಡು, ಷರಾಯಿನ ನೀರನ್ನೆಲ್ಲಾ ಹಿಂಡಿ, ಶಥಪಥ ತಿರುಗುತ್ತಿದ್ದ ಕಾವಲಿನವನು ತನ್ನ ನೇರಕ್ಕೆ ಬರುವುದನ್ನೇ ಕಾಯುತ್ತಿದ್ದು, ಅವನು ಬಂದ ಕೂಡಲೆ, ಹುಲಿಯ ಚಳಕದಿಂದ ಕಟಕಟೆಯಮೇಲೆ ಹಾರಿ, ಅವನಮೇಲೆ ಬಿದ್ದು—ಕೆಡವಿಕೊಂಡು, ಅವನ ಬಾಯಿಮೇಲೆ ತನ್ನ ಕೈಯನ್ನು ಅದುಮಿಹಿಡಿದು,

"ಲೋ, ತೆಪ್ಪಗಿದ್ದೆಯೋ ಸರಿ! ಇಲ್ಲವಾದರೆ, ನೀನು ಹುಟ್ಟಿಯೇ ಇರಲಿಲ್ಲಾ—ಅನ್ನಿಸಿ ಬಿಡುತ್ತೇನೆ! ನಾನು ಯಾರು—ಎಂದು ನಿನಗೆ ಗೊತ್ತಷ್ಟೆ! ಸಮಯಬಿದ್ದರೆ ಏನುಮಾಡಬಲ್ಲೆ--ಅನ್ನೋದೂ ಗೊತ್ತಿರಬೇಕು. ನಾನು ಕೈ ತೆಗೆದಾಗ ನೀನು ಏನಾದರೂ ಕೂಗಿಕೊಂಡೆಯೋ-ಸತ್ತೆ-ಎಂದು ತಿಳಿ!''-ಎಂದ,—ಕೆಳಗೆ ಬಿದ್ದಿದ್ದವನನ್ನು ಕುರಿತು.

ಕಾವಲಿನವನಿಗೆ ಅವನ ಮುಂದೆ ತನ್ನ ಆಟ ಏನೂ ನಡೆಯುವುದಿಲ್ಲವೆಂದು ಚೆನ್ನಾಗಿ ಗೊತ್ತಿತ್ತು. ಅವನು ಕೈಕಾಲುಗಳನ್ನು ಕಟ್ಟಿಸಿಕೊಳ್ಳುವುದಕ್ಕೂ—ಬಾಯಿಗೆ ಬಟ್ಟೆ ತುರುಕಿಸಿಕೊಳ್ಳುವುದಕ್ಕೂ ಮರುಮಾತಿಲ್ಲದೆ ಒಪ್ಪಿಕೊಂಡ. ಈ ಕೆಲಸಮಾಡಿ ಮುಗಿಸುವುದಕ್ಕೆ ಗ್ಯಾಸ್ಕೋಯಿನಿಗೆ ಹೆಚ್ಚುಕಾಲ ಬೇಕಾಗಲಿಲ್ಲ. ಅನಂತರ ಇವನನ್ನು ಮಗುವಿನಂತೆ ಎತ್ತಿ ಒಯ್ದು-ಹಡಗಿನ ಒಳಭಾಗದಲ್ಲಿ ಕೆಳಗಿನ ಮಟ್ಟದ ಒಂದು ಕ್ಯಾಬಿನಿ*ನಲ್ಲಿ ಇಟ್ಟು ಬೀಗ ಹಾಕಿದ. ಆಮೇಲೆ, ಅಲ್ಲೇ

* Cabin— ಹಡಗಿನ ಕೊಠಡಿ.

ಇದ್ದ ಹಾಸಿಗೆಯಿಂದ, ಒಂದು ಬಿಳೀ ಬಟ್ಟೆಯನ್ನು ಎಳೆದುಕೊಂಡು, —ಹಡಗಿನ ಮೇಲಕ್ಕೆ ಬಂದು, ಅದರ ಹಿಂಭಾಗದ ಡೆಕ್ಕಿನಮೇಲೆ ನಿಂತು, ಬಾವುಟದಂತೆ ಆಡಿಸಿದ.

ಈ ಸಂಕೇತಕ್ಕಾಗಿ ಬಹಳ ನಿರೀಕ್ಷೆಯಿಂದ ಕಾದಿದ್ದ ಕಾರಿ, ಬಿಳೀ ಬಟ್ಟೆಯನ್ನು ನೋಡಿದ ಕೂಡಲೆ ಸಂತೋಷದಿಂದ "ಹಾ, ನನಗೆ ಅದು—ಸಂಜ್ಞೆ!" ಎಂದುಕೊಂಡು—ಅಳಿಲಿನಂತೆ ಓಡಿಹೋಗಿ ನೀರಿಗಿಳಿದ. ಬೇಗ ಬೇಗ ಈಜುತ್ತ—ಕೆಲವು ನಿಮಿಷಗಳಲ್ಲೇ ಫೋಮಿನ ಪಕ್ಕವನ್ನು ಮುಟ್ಟಿದ. ಅಲ್ಲಿ ಗ್ಯಾಸ್ಕೋಯಿನ್ ಅವನಿಗಾಗಿ ಇಳಬಿಟ್ಟ ಒಂದು ಹಗ್ಗವನ್ನು ಹಿಡಿದು ಹತ್ತಿ ಹಡಗಿನ ಮೇಲಕ್ಕೆ ಹೋದ. ಗ್ಯಾಸ್ಕೋಯಿನ್ ಅವನನ್ನು ಕುರಿತು,

"ಬಹಳ ಗಟ್ಟಿಗ ಕಾರಿ-ನೀನು! ನೋಡು, ಹಡಗಿನ ಹಿಂಭಾಗದಲ್ಲಿ ಇಳೀಬಿದ್ದಿರೋ ಹಗ್ಗಹಿಡಿದುಕೊಂಡು ನೀರಿಗಿಳಿ; ಅಲ್ಲಿ ಒಂದು ದೋಣಿ—ಒಂದು ಬಟ್ಟೆ ಸುತ್ತಿದ ಹುಟ್ಟು, ಇದೆ. ಅದರಲ್ಲಿ ನೀನು ಬೇಗ ತೀರಕ್ಕೆ ಹೋಗಿ, ಥಾರ್‌ವಲ್ಡನ್ನೂ ಅವನ ಕಡೆ ಜನರನ್ನೂ ಕರೆದುಕೊಂಡು ಬಾ. ಆಮೇಲೆ, ಇಲ್ಲಿ ನೋಡು! ನನ್ನ ಷರಟು—ಬೂಟ್ಸು ತಗೊಂಡು ಬಾ—ಮರೀಬೇಡ. ಇನ್ನು ಬೇಗ ಹೊರಡು--ನಿನ್ನ ಸ್ನೇಹಿತ ಹೆನ್ರಿ ಸ್ಟೂಯರ್ಟನ ಪ್ರಾಣ ನಿನ್ನಕೈಲಿರಬಹುದು!" —ಎಂದ.

"ಹೆನ್ರಿ ಪ್ರಾಣ!" ಎಂದು ಆಶ್ಚರ್ಯದಿಂದ ಕೂಗಿದ ಕಾರಿ.

"ಶ್ ಶ್ ಶ್! ಮಾತಿಗೆ ಸಮಯವಿಲ್ಲ. ನಿನ್ನ ಚುರುಕಿನ ಮೇಲೆ ನಿಂತಿದೆ ಅವನ ಪ್ರಾಣ!"

ಹುಡುಗನನ್ನು ತ್ವರಿತಗೊಳಿಸಲು ಇದಕ್ಕಿಂತ ಗುರುತರವಾದ ಪ್ರಚೋದನೆ ಬೇಕಿರಲಿಲ್ಲ.

* * * *

ಹಡಗಿಗೂ ತೀರಕ್ಕೂ ಹೆಚ್ಚು ದೂರ ಇರಲಿಲ್ಲವಾದ್ದರಿಂದ, ಅತ್ಯಲ್ಪ ಕಾಲದಲ್ಲೇ ಕಾರಿ ದೋಣಿಯನ್ನು ನಡೆಸಿಕೊಂಡು ಹೋಗಿ, ತೀರದ ಮೇಲೆ ಕಾದಿದ್ದ ಓಲ್ ಥಾರ್‌ವಲ್ಡ್ ಮತ್ತು ಅವನ ಜೊತೆಯಲ್ಲಿದ್ದವ

ರನ್ನು ಕೂರಿಸಿಕೊಂಡು, ಪುನಃ ಹಡಗಿನ ಪಕ್ಕಕ್ಕೆ ಬಂದ. ಹಡಗು ನಿರಾಯಾಸವಾಗಿ ಇವರ ವಶವಾಯಿತು ಲಂಗರನ್ನು ಎತ್ತಿದರು. "ಫ್ಲೋಮ್" ಕೊಲ್ಲಿಯಿಂದ ಭೂತನಾಕೆಯಂತೆ ತೇಲುತ್ತ ಹೊರಟಿತು.

ತಾಳೆಯ ಮರಗಳ ಮರೆಯಿಂದ ಹೊರಬಿದ್ದ ಕೂಡಲೆ, ಹಡಗಿನ ಪಟಗಳು ಗಾಳಿಗೆ ಉಬ್ಬಿ—ಅದು ನೀರನ್ನು ಸೀಳುತ್ತ, ಗಂಟೆಗೆ ಸುಮಾರು ಹತ್ತು ಹನ್ನೊಂದು "ನಾಟು"*ಗಳ ವೇಗದಲ್ಲಿ ಹೋಗ ತೊಡಗಿತು.

ಗ್ಯಾಸ್ಕೋಯಿನ್, ಹಡಗಿನ ಮುಂಭಾಗದಲ್ಲಿ ನಿಂತು, ಬಂಡೆ ಗಳಿಂದಲೂ, ಹವಳದ ಕಟ್ಟೆಗಳಿಂದಲೂ ತುಂಬಿ ಅಪಾಯಕರವಾಗಿದ್ದ ತೀರದ ಉದ್ದಕ್ಕೂ, ಅತ್ಯಂತ ಚತುರತೆಯಿಂದ ಹಡಗನ್ನು ನಡೆಸುತ್ತ-ಹಿಂದೆ ನಾವು ತಿಳಿಸಿದ—ಒಡೆದ ಹಡಗಿನ ಭಗ್ನಾವಶೇಷಗಳು ಮಾತ್ರ ಇದ್ದ ಕೊಲ್ಲಿಗೆ ಅದನ್ನು ತಂದ. ಅಲ್ಲಿ, ತೀರದ ಮೇಲೆ ಡೇರೆಯ ಬಳಿ ಇದ್ದವರಿಗಾಗಿ ಒಂದು ದೋಣಿಯನ್ನು ಕಳಿಸಿದ. ಅವರೆಲ್ಲ, ಇವನು ವಾಪಸ್ಸು ಬರುವುದನ್ನೇ ಬಹಳ ಆತಂಕದಿಂದ ನಿರೀಕ್ಷಿಸುತ್ತಿದ್ದರು. ಆದ್ದರಿಂದ, ಅವರೆಲ್ಲ ದೋಣಿಯಲ್ಲಿ ಕುಳಿತು ಬಂದು, "ಫ್ಲೋಮಿ"ನ ಮೇಲೆ ಬರಬೇಕೆಂದು ಹೇಳಿಕಳಿಸಿದಾಗ— ಅವರ ಆಶ್ಚರ್ಯಕ್ಕೂ— ಆನಂದಕ್ಕೂ ಮಿತಿಯೇ ಇರಲಿಲ್ಲ.

ಅವರೆಲ್ಲ ಬಂದು ಹಡಗನ್ನು ಹತ್ತಿದ ಕೂಡಲೆ, ಗ್ಯಾಸ್ಕೋಯಿನ್ ಹಡಗನ್ನು ಬೇಗ ಬೇಗ ನಡೆಸಿ, ದ್ವೀಪದ ಮೇಲೆ ಯಾವ ದಿಕ್ಕಿನಿಂದ ಗಾಳಿ ಬೀಸುತ್ತಿತ್ತೋ ಆ ದಿಕ್ಕಿನ ದ್ವೀಪದ ಪಾರ್ಶ್ವಕ್ಕೆ ಹೋದ. ಅಲ್ಲಿ ಹಡಗನ್ನು ನಿಲ್ಲಿಸಿ, ಪಟಗಳನ್ನು ಏರಿಸಿ, ಹಡಗಿನಿಂದ ಒಂದು ದೋಣಿ ಯನ್ನು ನೀರಿಗೆ ಬಿಡುವಂತೆ ಅಪ್ಪಣೆ ಮಾಡಿದ. ಅನಂತರ, ಹಡಗು ನಿಂತ ಹಾಗೆಯೇ ಇರಬೇಕೆಂದು ಅಪ್ಪಣೆ ಮಾಡಿ, ಅವಸರದಿಂದ ಹಡ ಗಿನ ಕೆಳಗಡೆಯ ಕ್ಯಾಬಿನ್ನಿಗೆ ಹೋಗಿ, ಅಲ್ಲಿ ತಾನು ಬಂಧಿಸಿ ಇಟ್ಟಿದ್ದ ಕಾವಲಿನವನನ್ನು ಎತ್ತಿ ತಂದ. ಇದನ್ನು ನೋಡಿ ಹಡಗಿನಲ್ಲಿದ್ದವರಿ

* Knot ಸಮುದ್ರದಲ್ಲಿ ಹಡಗಿನ ಪ್ರಯಾಣದ ದೂರದ ಅಳತೆ; ೬೦೮೦ ಅಡಿ-ಉದ್ದ

ಗೆಲ್ಲ ಬಹಳ ಆಶ್ಚರ್ಯವಾಯಿತು. ಅನಂತರ, ಗ್ಯಾಸ್ಕೋಯಿನ್ ಕಾವಲಿನವನನ್ನು ಬಂಧಿಸಿದ್ದ ಹಗ್ಗಗಳನ್ನೆಲ್ಲ ಬಿಚ್ಚಿ-ಅವನನ್ನು ಕುರಿತು,

"ಇಲ್ಲಿ ಕೇಳು ಕಾನ್ವೇ, ನಾನು ಹೆಚ್ಚು ಮಾತಿನವನಲ್ಲ; ಇವತ್ತಂತೂ ನನಗೆ ಪುರಸತ್ತು ಸ್ವಲ್ಪವೂ ಇಲ್ಲ. ನಿನ್ನನ್ನು ಬಿಟ್ಟುಬಿಡುತ್ತೇನೆ; ಆ ದೋಣಿಗೆ ಇಳಿದು ಹೋಗು—ಅದನ್ನು ನಡೆಸುವುದಕ್ಕೆ ಒಂದು ಹುಟ್ಟು ಸಾಕು; ಗಾಳಿ ದೋಣಿಯನ್ನ ತೀರದ ಕಡೆಗೆ ತಳ್ಳುತ್ತದೆ. ವ್ಯಾಂಟನ್ನಿಗೂ—ಹಿಂದಿನ ನನ್ನ ಇತರ ಜೊತೆಯವರಿಗೂ, ಅದು ನನ್ನ ಕಟ್ಟಕಡೆಯ ಉಡುಗೆರೆ. ಅದು ಅವರನ್ನೆಲ್ಲ ಕೂರಿಸಿಕೊಳ್ಳುವಷ್ಟು ದೊಡ್ಡದಾಗಿದೆ. ನಾನು ನನ್ನ ಪಾಪಗಳಿಗೆಲ್ಲ ಪಶ್ಚಾತ್ತಾಪಪಡುತ್ತೇನೆಂದೂ—ಅವರೂ, ಎಷ್ಟು ಬೇಗ ಪಶ್ಚಾತ್ತಾಪ ಪಟ್ಟರೆ ಅಷ್ಟು ಒಳ್ಳೆಯದೆಂದೂ, ಅವರಿಗೆ ತಿಳಿಸು. ಅವರು ತಿದ್ದಿಕೊಳ್ಳಲು ಅವಕಾಶವೂ ಕಾಲವೂ ಇರುವಂತೆ—ಅವರಿಗೆ, ಪಾರಾಗುವ ಸಹಾಯವನ್ನು ಮಾತ್ರ ನಾನು ಒದಗಿಸಬಲ್ಲೆ. ಈ ದ್ವೀಪ ಇನ್ನು ಹೆಚ್ಚುಕಾಲ—ಇದುವರೆಗೆ ಇದ್ದಂತೆ ಗುಪ್ತವಾಗಿ—ಸುರಕ್ಷಿತವಾಗಿರುವುದಿಲ್ಲ; ಆದ್ದರಿಂದ ಅವರು ಇದನ್ನು ಬೇಗ ಬಿಟ್ಟು ಹೋದಷ್ಟೂ ಅವರಿಗೆ ಒಳ್ಳೇದು. ಹೊರಡು—ನಮಸ್ಕಾರ!"

—ಎಂದು, ಅವನನ್ನು, ತೋಳು ಹಿಡಿದು ಬಲಾತ್ಕಾರವಾಗಿ ಹಡಗಿನ ಪಕ್ಕಕ್ಕೆ ಒಯ್ದು—ದೋಣಿಗೆ ಇಳಿಯುವಂತೆ ಒತ್ತಾಯಪಡಿಸಿದ ಅವನು ಇಳಿದ ಕೂಡಲೆ, ದೋಣಿಗೆ ಕಟ್ಟಿದ್ದ ಹಗ್ಗವನ್ನು ಕತ್ತರಿಸಿಬಿಟ್ಟ.

ಅನಂತರ ಅವನು ಹಡಗಿನಲ್ಲಿ ಪುನಃ ತನ್ನ ಸ್ಥಾನಕ್ಕೆ ಬಂದು, ಹಡಗನ್ನು ನಡೆಸಿಕೊಂಡು, ಅವರು ಇಲ್ಲಿಗೆ ತಂದಿದ್ದ "**ವಾಸ್ಪ್**" ಹವಳದ ಬಂಡೆಗಳಿಗೆ ತಾಗಿ ಮುರಿದುಹೋಗಿದ್ದ ಸ್ಥಳಕ್ಕೆ ಬಂದ.

ಇಲ್ಲಿ, ವಿಶೇಷವಾಗಿ ನೀರಿನಿಂದ ಎದ್ದು, ಎಲ್ಲೆಲ್ಲೂ ಕಾಣುತ್ತಿದ್ದ ಹವಳದ ಕಟ್ಟೆಗಳ ನಡುವೆ, ಸಮುದ್ರದ ಅಲೆಗಳು ಭೋರ್ಗರೆದು ಅಪ್ಪಳಿಸುತ್ತಿದ್ದವು. ಇಲ್ಲಿ, ಆ ರಾತ್ರಿಯೆಲ್ಲ, ಗ್ಯಾಸ್ಕೋಯಿನ್, ಒಂದು ಮಾತೂ ಆಡದೆ, ಸುತ್ತಮುತ್ತ ಇದ್ದವರನ್ನೂ ಲಕ್ಷಿಸದೆ, ಬಂಡೆಗಳ

ನಡುವೆ—ಅಲ್ಲೋಲ ಕಲ್ಲೋಲವಾಗಿ ಕುದಿಯುತ್ತಿದ್ದ ಸಮುದ್ರದಲ್ಲಿ—ಮೃತ್ಯುವಿನೊಡನೆ ಸರಸವಾಡುತ್ತಿದ್ದವನಂತೆ—ಹಡಗನ್ನು ಸುತ್ತಾಡಿ ಸುತ್ತ ಕಾಲ ಕಳೆದ.

ಬೆಳಗಾಗತೊಡಗಲು, ಅಪಾಯಕರವಾದ ಆ ಹವಳದ ಬಂಡೆಗಳ ಸಾಲಿನಿಂದ ಹೊರಹಾಯ್ದು, ಗಾಳಿಗೆ ಬೆನ್ನಾಗಿ, ಹಡಗನ್ನು ದಕ್ಷಿಣಾಭಿಮುಖವಾಗಿ ನಡೆಸಿಕೊಂಡು ಬಂದ. ಈ ಸಮಯದಲ್ಲಿ ಕಾರಿ ಸ್ವಲ್ಪ ಧೈರ್ಯತಂದುಕೊಂಡು, ಗ್ಯಾಸ್ಕೋಯಿನಿನ ಬಳಿ ಹೋಗಿ ಅವನಮುಖವನ್ನೇ ನೋಡುತ್ತ,

"ನೀವು ಹೆನ್ರಿಗಾಗಿ ಹುಡುಕುತ್ತಿದ್ದೀರಿ ಅಂತ ಕಾಣುತ್ತೆ"-ಎಂದ.

"ಹೌದು ಮಗೂ—ಅವನನ್ನೇ ಹುಡುಕುತ್ತಾ ಇದ್ದೇನೆ"

—ಎಂದ, ಗ್ಯಾಸ್ಕೋಯಿನ್. ಅವನ ಮುಖದಲ್ಲಿ ಕ್ಷಣಕಾಲ ಏನೋ ಅತಿ ಮೃದುವಾದ ದಯಾದೃಷ್ಟಿ ತೋರಿ ಅಳಿಸಿಹೋಯಿತು. ಅನಂತರ, ಅಲ್ಲಿ ಅತಿ ಗಭೀರವಾದ—ಚಿಂತಾದೃಷ್ಟಿ ನೆಲಸಿತು. ಕಾರಿ ಮರುಮಾತಿಲ್ಲದೆ ಹೊರಟುಹೋದ.

ರಾತ್ರಿ ಕಳೆದು, ಕತ್ತಲಿನ ಅಪಾಯ ನಿವಾರಣೆಯಾಗಿದ್ದ ಈ ಸಮಯದಲ್ಲಿ, ಹಡಗಿನಲ್ಲಿದ್ದವರೆಲ್ಲರೂ, ಹೆನ್ರಿಯ ಗತಿ ಏನಾಯಿತೋ ತಿಳಿದುಕೊಳ್ಳಲು—ಹಾಗೂ ಹೀಗೂ ಜೀವಂತನಾಗಿದ್ದರೆ—ಹುಡುಕಿ ರಕ್ಷಿಸಲು ಬಹಳ ಕಾತರರಾದರು. ಆದರೆ, ಅವರು ಸುತ್ತಮುತ್ತ ಸಮುದ್ರವನ್ನು ಬಹುದೂರದವರೆಗೆ ಹುಡುಕಿದರೂ, ಅವರ ಕಣ್ಣಿಗೆ, ಅವನ-ಅಥವಾ "ವಾಸ್ಪಿನ" ಕುರುಹು ಏನೂ ಕಾಣಿಸಲಿಲ್ಲ. ಈ ಸಮಯದಲ್ಲಿ ಗ್ಯಾಸ್ಕೋಯಿನ್ ಬುದ್ಧಿಭ್ರಮೆಯಾದವನಂತೆ ತೋರುತ್ತಿದ್ದ. ಹಗಲೂ ರಾತ್ರೆ, ಹಡಗಿನ ಮುಂಭಾಗದಲ್ಲಿ ನಿಂತು, ತಾನೇ ಹಡಗನ್ನು ನಡೆಸುತ್ತಿದ್ದ. ಆಗಾಗ ಯಾರಾದರೂ ತಂದುಕೊಟ್ಟ ಒಂದೋ ಎರಡೋ ಬಿಸ್ಕತ್ತುಗಳನ್ನು ಮಾತ್ರ ತಿನ್ನುತ್ತ, ಯಾರೊಡನೆಯೂ ಮಾತಾಡದೆ, ಪ್ರಶ್ನೆಗೆ ಉತ್ತರವನ್ನೂ ಕೊಡದೆ ಇದ್ದ.

ಕಣ್ಮರೆಯಾಗಿದ್ದ ಯುವಕನಿಗಾಗಿ ಅವನು ಪಡುತ್ತಿದ್ದ ದುಃಖದ ಆಳವನ್ನು ನೋಡಿ, ಹಡಗಿನಲ್ಲಿದ್ದವರೆಲ್ಲ ಅವನಿಗಾಗಿ ಮರುಗಿದರು.

* * * *

ಬಂಡೆಗಳಿಗೆ ತಾಗಿದ್ದ ವಾಸ್ಪ್-ಗೆ ಬಹಳಘಾಸಿಯಾಗಿದ್ದಿತು. ಅಲೆಗಳ ಹೊಡೆತದ ರಭಸಕ್ಕೆ ಅದು ತುಮುಲು ತುಮುಲಾಗಿ ಹೋಗಿತ್ತು. ಹೆನ್ರಿ ಸ್ಟೂಯರ್ಟ್, ಒರಟಾಗಿ ಒಂದು ತೆಪ್ಪ ಮಾಡಿಕೊಂಡು, ಅದರ ಮೇಲೆ ಗಾಳಿಯೂ—ಅಲೆಗಳೂ ಒಯ್ದ ಕಡೆ ಹೋಗುತ್ತ ಮೂರು ದಿನ ಕಳೆದ. ಅನಂತರ, ಸಮುದ್ರದ ಆ ಭಾಗದಲ್ಲಿ, ಆ ಸಮಯದಲ್ಲಿ ಕಾವಲು ತಿರುಗುತ್ತಿದ್ದ ಟಾಲಿಸ್ಮನಿನವರ ಕಣ್ಣಿಗೆ ಬಿದ್ದ. ಅವರು, ಮೂರ್ಛಾವಸ್ಥೆಯಲ್ಲಿದ್ದ ಅವನನ್ನು ರಕ್ಷಿಸಿ ತಮ್ಮ ಹಡಗಿನ ಮೇಲಕ್ಕೆ ಎತ್ತಿಕೊಂಡರು.

ಹೆನ್ರಿ ರಕ್ಷಿತನಾದ ಎಂಟು ದಿನಗಳ ಮೇಲೆ, ಸ್ಕೂನರ್ ಫ್ಲೋಮ್ ಟಾಲಿಸ್ಮನಿಗೆ ಕಾಣಿಸಿಕೊಂಡಿತು. ಗ್ಯಾಸ್ಕೋಯಿನ್, ತನ್ನ ಹಡಗನ್ನು ಬಿಟ್ಟು ಟಾಲಿಸ್ಮನ್ ಮೇಲೆ ಹೋದಾಗ—ಜೀವಂತನಾಗಿ ಕ್ಷೇಮವಾಗಿದ್ದ ಹೆನ್ರಿಯನ್ನು ಕಂಡು ಆನಂದಭರಿತನಾದ.

ಗ್ಯಾಸ್ಕೋಯಿನ್ ಹೆನ್ರಿಯನ್ನು ತನ್ನ ಸ್ಕೂನರಿಗೆ ಕರೆದೊಯ್ದು, ಅಲ್ಲಿ ರಹಸ್ಯವಾಗಿ, ತಾನು ಅವನ ಸ್ವಂತ ತಂದೆಯೆಂದೂ, ವಿಧವೆಯೆಂದು ಭಾವಿಸಲ್ಪಟ್ಟಿದ್ದ ಮೇರೀ ಸ್ಟೂಯರ್ಟ್ ನಿಜವಾಗಿಯೂ ತನ್ನ ಕೈಹಿಡಿದ ಹೆಂಡತಿಯೆಂದೂ ತಿಳಿಸಿದ.

---

## ೧೩

## ಗ್ಯಾಸ್ಕೋಯಿನಿನ ಪರಿಹಾರ ದಾನ

ಫ್ಲೋಮ್ ಸ್ಯಾಂಡೀ ಕೊಲ್ಲಿಗೆ ಬಂದ ಕೂಡಲೆ, ಕ್ಯಾಪ್ಟನ್ ಮಾಂಟೆಗೋ, ಗ್ಯಾಸ್ಕೋಯಿನನ್ನು ಬಂಧಿಸಿ, ಪಾಳೆಯದ ಕಾರಾಗೃಹದಲ್ಲಿ ಇಡಿಸಿದ. ಅವನನ್ನು ಇಂಗ್ಲೆಂಡಿಗೆ ಹಿಡಿದೊಯ್ದು, ಅಲ್ಲಿ ಕಡಲ್ಗಳ್ಳತನದ ಆಪಾದನೆಯ ಮೇಲೆ ಅವನನ್ನು ವಿಚಾರಣೆಗೆ ಗುರಿಪಡಿಸುವವನಾಗಿದ್ದ.

ಕಡಲ್ಗಳ್ಳತನ ಮಹಾಪರಾಧವಾಗಿ ಪರಿಗಣಿಸಲ್ಪಟ್ಟಿದ್ದದ್ದರಿಂದ, ಗ್ಯಾಸ್ಕೋಯಿನಿಗೆ ಗಲ್ಲಿಗೇರಿಸುವ ಶಿಕ್ಷೆಯಾಗುವುದರಲ್ಲಿ ಸಂದೇಹವೇ ಇರಲಿಲ್ಲ. ತಂದೆಗೆ ಒದಗಿದ್ದ ಈ ಆಪತ್ತಿನಿಂದ ಅವನನ್ನು ಪಾರು ಮಾಡಲು, ಮಗ ಹೆನ್ರಿ, ದೃಢಸಂಕಲ್ಪಮಾಡಿದ.

ಒಂದು ಮಧ್ಯ ರಾತ್ರಿ, ಕೆಲವು ನಂಬಿಕೆಯಾದ ಮತ್ತು ವಿಶ್ವಾಸಿಗಳಾದ ಸ್ನೇಹಿತರ ಸಹಾಯದಿಂದ, ತಂದೆಯನ್ನು ಕಾರಾಗೃಹದಿಂದ ತಪ್ಪಿಸಿ ಹೊರಗೆ ತಂದು—ಸಮುದ್ರ ತೀರಕ್ಕೆ ಬಂದ. ಅಲ್ಲಿ, ಚಿಕ್ಕ ಹಡಗಿನಂತೆ ಇದ್ದ, ಒಂದು ಅರ್ಧ ಡೆಕ್ಕಿನ ಭಾರಿ ದೋಣಿ ಮುಂಗಡವಾಗಿ ಸಿದ್ಧವಾಗಿತ್ತು. ಗ್ಯಾಸ್ಕೋಯಿನ್, ಹೆಂಡತಿ ಮತ್ತು ಮಗನೊಡನೆ ಇದರಲ್ಲಿ ಕುಳಿತು, ಸ್ಯಾಂಡಿ ಕೊಲ್ಲಿಯನ್ನು ಬಿಟ್ಟ.

ಗ್ಯಾಸ್ಕೋಯಿನಿನ ಕುಟುಂಬದೊಡನೆ, ಅವರ ಸ್ನೇಹಿತರಾದ ಬಂಪಸ್ ಮತ್ತು ಕಾರಿ ಸಹ ಇದ್ದರು.

* * * * *

ಪಾಠಕರೇ, ನಮ್ಮ ಈ ಸಾಹಸ ನಾಟಕದ ಕಥೆ ಇನ್ನು, ಹೆಚ್ಚು ಕಡಿಮೆ, ಮುಗಿದ ಹಾಗೆಯೇ. ಇದು, ಒಂದು ಚಿಕ್ಕ ಚಿತ್ರದಂತೆ, ಯಾರು ನಿಮ್ಮ ಗಮನವನ್ನು, ಬಹುಶಃ ಸ್ವಲ್ಪ ನಿಮ್ಮ ಸಹಾನುಭೂತಿಯನ್ನು, ಸೆಳೆದಿದ್ದಾರೋ ಅವರ ಜೀವನ ಚರಿತ್ರೆಯಲ್ಲಿ—ಅತ್ಯಲ್ಪ ಭಾಗವನ್ನು ಮಾತ್ರ ವಿವರಿಸಿದೆ.

ಒಂದು ಕಾಲದಲ್ಲಿ ಗಂಧದ ಮರದ ವರ್ತಕನಾಗಿದ್ದವನೂ, ಅವನ ಸ್ನೇಹಿತರೂ,—ಹೇಳಿದ ಮತ್ತು ಮಾಡಿದ, ಹಾಗೂ ಏನು ಹೇಳಿದರೋ ಮಾಡಿದರೋ, ಅವುಗಳ ವಿಷಯವಾಗಿ ಹೇಳಬಹುದಾದ ಎಲ್ಲವನ್ನೂ ಪೂರ್ಣವಾಗಿ ವಿವರಿಸುವುದಕ್ಕೆ—ವರ್ಣಿಸಿ ಮುಗಿಸುವುದಕ್ಕೆ--ಅನೇಕಾನೇಕ ಅದ್ಭುತಗಾತ್ರದ ಗ್ರಂಥಗಳಾದರೂ ಸಾಕಾಗುವುದಿಲ್ಲ. ಆದರೂ, ಅವರ ಚರಿತ್ರೆಯಲ್ಲಿ—ಅಸಂಖ್ಯಾತ ವಿವರಗಳ ಮಧ್ಯೆ ಕೆಲವು ಮುಖ್ಯವಾದ ಅಂಶಗಳು ಇನ್ನೂ ಉಳಿದಿವೆ. ಅವುಗಳನ್ನು ಹೇಳದೆ ಮೌನವಾಗಿರುವುದು, ಅಕ್ಷಮ್ಯವೆಂದು ನಮಗೆ ತೋರಿರುವುದರಿಂದ, ಕೊನೆ

ಅಂಕದ ತೆರೆ ಬೀಳುವ ಮೊದಲು, ಅವುಗಳ ವಿಷಯವನ್ನು ಸಂಕ್ಷೇಪ ವಾಗಿ ತಿಳಿಸಿ ಬಿಡುತ್ತೇವೆ

ವಿಶಾಲವಾದ ಸಮುದ್ರದ ಮಧ್ಯದಲ್ಲಿ, ಎಲ್ಲ ಸ್ಥಳಗಳಿಗೂ ಬಹು ದೂರವಾಗಿ, ಒಂದು ದ್ವೀಪವಿದೆ. ಅತ್ಯಂತ ರಮಣೀಯವಾದ ಸ್ಥಳ; ಭಗವಂತನ ಇಚ್ಛೆಯಿಂದ, ಭೂಮಿಯ ಕಾಳಗರ್ಭವನ್ನು ಭೇದಿಸಿ ಕೊಂಡು—ನೀಲಜಲರಾಶಿಯನ್ನು ತೂರಿಕೊಂಡು ಎದ್ದ—ಸುಮನೋ ಹರ ಸಾಗರ ರತ್ನ—ಆ ದ್ವೀಪ. ಅದರ ಹೆಸರನ್ನು ನಾವು ತಿಳಿಸುವು ದಿಲ್ಲ; ಅದು ಇರುವ ಸ್ಥಳವನ್ನೂ ತಿಳಿಸುವುದಿಲ್ಲ

ನಮ್ಮ ಕಥೆಯ ಸಮಯದಲ್ಲಿ, ಈ ಸುಂದರವಾದ ದ್ವೀಪದ ಮೇಲೆ, ಕ್ರಿಶ್ಚಿಯನ್ ಜನರ ಚರ್ಚುಗಳೂ—ಮನೆಗಳೂ, ಅದೇ ತಾನೆ ಒಂದೊಂದಾಗಿ ಉದ್ಭವಿಸುತ್ತಿದ್ದವು. ದ್ವೀಪದ ಮೂಲ ನಿವಾಸಿಗಳಾದ ಕಪ್ಪು ಜನರು, ಕ್ರೈಸ್ತಮತದ ಅಮೌಲ್ಯವಾದ ಸೌಖ್ಯವನ್ನು ಸ್ವಲ್ಪ ಮಟ್ಟಿಗೆ ಮೆಚ್ಚುವುದಕ್ಕೂ—ನಾಗರಿಕತೆಯ ಕಲೆಗಳನ್ನು ಅಭ್ಯಾಸ ಮಾಡುವುದಕ್ಕೂ ಪ್ರಾರಂಭಿಸಿದ್ದರು. ನೇಗಿಲುಗಳು, ವ್ಯವಸಾಯ ವನ್ನೇ ಕಾಣದೆ ಇದ್ದ ನೆಲದ ಮಣ್ಣನ್ನು ಉಳಲಾರಂಭಿಸಿದ್ದವು. ವ್ಯಾಪಾರದ ಹಡಗುಗಳು ಈ ದ್ವೀಪದ ತೀರಕ್ಕೆ ಬಂದು ಹೋಗ ತೊಡಗಿದ್ದವು. ಇಲ್ಲಿ, ಇನ್ನೂ ನಾಗರಿಕ ಮನುಷ್ಯರಲ್ಲಿ ಮಾತ್ರ ತಲೆದೋರುವ ಪಾಪಗಳೂ—ದೋಷಗಳೂ—ದುಷ್ಟಕಾರ್ಯಗಳೂ ತಲೆ ಹಾಕಿರಲಿಲ್ಲ. ಹೊಸದಾಗಿ ಸ್ಥಾಪಿತವಾಗಿ ಪ್ರವರ್ಧಮಾನಕ್ಕೆ ಬರು ತ್ತಿದ್ದ ಈ ವಸಾಹತುವಿನ ಜೀವನದಲ್ಲಿ ಶೈಶವದ ಸರಳತೆಯೂ—ನವೀನತೆಯೂ, ಬೆಡಗೂ ಇದ್ದವು.

ಒಂದು ಮನೋಹರವಾದ ಪ್ರಾತಃಕಾಲದಲ್ಲಿ, ಈ ದ್ವೀಪದ ಬಂದರಿಗೆ—ಒಂದು ಅರ್ಧ ಡೆಕ್ಕಿನ ದೊಡ್ಡ ದೋಣಿ ಬಂದಿತು. ಅದು ಇಳಿಯುವ ಜಗುಲಿಗೆ ಬಂದು ನಿಂತಕೂಡಲೆ, ಅದರಿಂದ ಮೂರು ಮಂದಿ ಉನ್ನತಾಕೃತಿಯ ವ್ಯಕ್ತಿಗಳು ನೆಲಕ್ಕೆ ಇಳಿದರು. ಹಿಂದೆಯೇ ಒಬ್ಬ ಹುಡುಗನೂ, ಮಧ್ಯವಯಸ್ಸಿನ, ಸುಂದರಿಯಾದ ಒಬ್ಬ ಹೆಂಗಸೂ

ಇಳಿದರು. ಇವರನ್ನು ನೋಡಿ, ಅಲ್ಲೇ ಸುಳಿದಾಡುತ್ತಿದ್ದ ಕೆಲವು ಕಪ್ಪು ಜನರಿಗೆ ಬಹಳ ಆಶ್ಚರ್ಯವಾಯಿತು.

ದೋಣಿಯಲ್ಲಿ ವ್ಯಾಪಾರದ ಸರಕಿನ ಕೆಲವು ಬೇಲುಗಳಿದ್ದವು. ಇವುಗಳನ್ನು ಬೇಗನೆ ದೋಣಿಯಿಂದ ಇಳಿಸಿ ಆದ ಮೇಲೆ, ಇವುಗಳನ್ನು ಸುರಕ್ಷಿತವಾಗಿಡಲು, ಇವರಲ್ಲಿ ಒಬ್ಬನು, ಅಲ್ಲಿದ್ದ ಕಪ್ಪು ಮನುಷ್ಯನೊಬ್ಬನನ್ನು ಕುರಿತು, ಹತ್ತಿರದ ಯಾವುದಾದರೂ ಮಳಿಗೆಗೆ ದಾರಿ ತೋರಿಸುವಂತೆ ಹೇಳಿದ. ಅನಂತರ, ವರ್ತಕ ನೌಕೆಯ ಕ್ಯಾಪ್ಟನ್ನಿನ ಒರಟಾದ ಉಡುಪಿನಲ್ಲಿದ್ದ—ಗುಂಪಿಗೆಲ್ಲಾ ದೊಡ್ಡ ಆಕೃತಿಯ ಒಬ್ಬವ್ಯಕ್ತಿ, ಉಳಿದವರನ್ನು ದೋಣಿ ಕಾಯಲು ಹಿಂದೆಯೇ ಬಿಟ್ಟು—ಹೆಂಗಸೊಬ್ಬಳನ್ನೇ (ಬಹುಶಃ ಅವಳು ಹೆಂಡತಿಯೇ ಆಗಿರಬೇಕು)—ಜೊತೆಯಲ್ಲಿ ಕರೆದುಕೊಂಡು, ವಸಾಹತುವಿನ ಮುಖ್ಯಾಧಿಕಾರಿಯನ್ನು ಹುಡುಕಿಕೊಂಡು ಹೊರಟ.

ಮುಖ್ಯಾಧಿಕಾರಿಯನ್ನು ಕಂಡು, ತನ್ನ ಹೆಸರು ಮಿ|| ಸ್ಟೂಯರ್ಟ್ ಎಂದು ಪರಿಚಯ ಕೊಟ್ಟ. ಮುಂದೆ ಮಾತನಾಡುತ್ತ, ವ್ಯಾಪಾರದ ಸರಕಿನ ಕೆಲವು ಬೇಲುಗಳನ್ನು ತಂದಿರುವುದರಿಂದ, ತಾನು ಈ ದ್ವೀಪದಲ್ಲೇ ಒಬ್ಬ ವ್ಯಾಪಾರಿಯಾಗಿ ನೆಲಸುವ ಇಚ್ಛೆಯುಳ್ಳವನಾಗಿರುವುದಾಗಿಯೂ; ಹಿಂದೆ ತಾನು ಇಂಜನಿಯರು ಕಸಬಿನಲ್ಲೂ—ಹಡಗು ಕಟ್ಟುವ ಕಸಬಿನಲ್ಲೂ ತಯಾರಾದವನೆಂದೂ; ಸಾಧ್ಯವಾದರೆ, ಆ ಕಸಬುಗಳಲ್ಲೂ ಕೆಲಸಗಳಲ್ಲೂ ಕೆಲಸ ಮಾಡುವ ಇಷ್ಟವಿರುವುದಾಗಿಯೂ ಹೇಳಿ, ಕೊನೆಯಲ್ಲಿ, ದ್ವೀಪದಲ್ಲಿನ ವ್ಯಾಪಾರ ಸ್ಥಿತಿ—ಜೀವನ ಸೌಕರ್ಯ—ಮುಂತಾದವುಗಳನ್ನು ವಿಚಾರಿಸಿ—ಅವನ ಸಲಹೆ ಕೇಳಿದ.

ಮುಖ್ಯಾಧಿಕಾರಿ ಇವನಿಗೆ ಬೇಕಾದ ಎಲ್ಲಾ ವಿಷಯಗಳನ್ನೂ ತಿಳಿಸಿದ. ಇವನ ಸೌಜನ್ಯವನ್ನೂ—ಮುಂದಾಲೋಚನೆಯನ್ನೂ ನೋಡಿ ಅಧಿಕಾರಿಗೆ ಇವನ ವಿಷಯದಲ್ಲಿ ಬಹಳ ಒಳ್ಳೆ ಅಭಿಪ್ರಾಯವುಂಟಾಯಿತು ಈ ಹೊಸ ಮನುಷ್ಯ ಮುಂದೆ ಮಾತನಾಡುತ್ತ, ದ್ವೀಪದ ಮೂಲನಿವಾಸಿಗಳಾದ ಕಪ್ಪು ಜನರಲ್ಲೂ—ಹೊರಗಿನಿಂದ ಬಂದು ನೆಲಸಿದ್ದ ಬಿಳಿಯ ಜನರಲ್ಲೂ ಮತ—ವಿದ್ಯಾಭ್ಯಾಸ ಮುಂತಾದುವುಗಳ

ವಿಷಯವಾಗಿ, ಸೂಕ್ಷ್ಮವಾಗಿ ವಿಚಾರಿಸಿ ತಿಳಿದುಕೊಂಡು, ಅವನಿಂದ ಬೀಳ್ಕೊಂಡ. ಅಧಿಕಾರಿಗೆ, ಇವನು ಬಹಳ ಬುದ್ಧಿವಂತನೆಂದೂ— ಪ್ರಜಾಹಿತೈಷಿಯೆಂದೂ, ಇವನು ವಸಾಹತುವಿಗೆ ಅಮೂಲ್ಯವಾದ ವ್ಯಕ್ತಿಯಾಗುವನೆಂದೂ ಬಹಳ ಸಂತೋಷವಾಯಿತು.

ಬೇಗನೆ ವ್ಯಾಪಾರಕ್ಕೆ ಒಂದು ಸಣ್ಣ ಮಳಿಗೆ ಕಟ್ಟಲಾಯಿತು. ಈ ಹೊಸಬ ಐಶ್ವರ್ಯವಂತನಾಗಿರಲಿಲ್ಲ. ಅಂಗಡಿ ವ್ಯಾಪಾರವನ್ನು ಮುಖ್ಯವಾಗಿ ಕಾರಿ ನೋಡಿಕೊಳ್ಳುತ್ತಿದ್ದ. ಈತ ಅದರ ಮೇಲ್ವಿಚಾರಣೆಯಲ್ಲಿರುತ್ತ, ಹಡಗು—ದೋಣಿ ಮುಂತಾದವುಗಳ ನಿರ್ಮಾಣದಲ್ಲಿ ಸಾಧಾರಣ ಬಡಗಿ ಕೆಲಸ ಮಾಡುತ್ತ, ತನ್ನ ಜೀವನೋಪಾಯಕ್ಕೆ ತಕ್ಕಷ್ಟನ್ನು ಸಂಪಾದಿಸತೊಡಗಿದ. ಈ ಕೆಲಸದಲ್ಲಿ ಸಹಾಯಕ್ಕೆ ತನ್ನ ಮಗ ಹೆನ್ರಿಯನ್ನು ಕರೆದುಕೊಂಡ.

ರಹಸ್ಯಾವೃತರಾಗಿದ್ದ ಈ ಹೊಸಬರು, ಪಚ್ಚೆ ದ್ವೀಪದ (ಶಾಂತಿ ಸಾಗರದ ಈ ರತ್ನವನ್ನು ನಾವು ಹೀಗೆ ವರ್ಣಿಸುತ್ತೇನೆ) ಸಾತ್ವಿಕರಾದ ನಿವಾಸಿಗಳ ವಿಶೇಷ ಕಾಡುಹರಟೆಗೂ, ಊಹಾಪೋಹಗಳಿಗೂ— ವಿಷಯವಾಗಿಯೂ—ಕಾರಣರಾಗಿಯೂ ಇದ್ದರು. ಇವರು ಯಾರೊಡನೆಯೂ ಹೆಚ್ಚಾಗಿ ಸಲಿಗೆಯಾಗಿರದೆ—ಮಾತನಾಡದೆ ತಮ್ಮಷ್ಟಕ್ಕೆ ತಾವು ಇರುತ್ತಿದ್ದರು. ಆದ್ದರಿಂದ, ಇವರ ವಿಷಯದಲ್ಲಿ ತೀರ ಕುತೂಹಲಿಗಳಾಗಿದ್ದವರು ಕೂಡ, ಇವರ ಸ್ವಂತ ವಿಷಯ ಏನನ್ನೂ ಅರಿತುಕೊಳ್ಳಲಾರದೆ—ನಿರಾಶರಾಗಿ ತೆಪ್ಪಗಾಗಿಬಿಡುತ್ತಿದ್ದರು.

ಆದರೆ, ಉಳಿದಂತೆ, ಈ ಹೊಸ ಕುಟುಂಬದವರು, ದಯೆ, ಕನಿಕರ, ಸರಳ ಸ್ವಭಾವ—ಇವುಗಳಿಗೆ ಹೆಸರಾಗಿದ್ದರು. ಅದರಲ್ಲೂ, ಮಿಸೆಸ್ ಸ್ಟೂಯರ್ಟಳು, ಆ ದ್ವೀಪದಲ್ಲಿ ನೆಲಸಿದ್ದ ಮಿಶನರಿಯ ಸ್ನೇಹಿತಳಾಗಿ, ಆತನ ಶಿಷ್ಯವರ್ಗದಲ್ಲೆಲ್ಲ ಬಹಳ ಶ್ರಮಪಟ್ಟು ಕೆಲಸಮಾಡುವವಳಾದಳು. ಮಿ॥ ಸ್ಟೂಯರ್ಟ್ ಕೂಡ, ಆತನ ಸ್ನೇಹವನ್ನು ಸಂಪಾದಿಸಿದ. ಆದರೆ ಸತ್ಕುಲಜಾತನೂ, ದಯಾಮಯನೂ ಆಗಿದ್ದ ಈತನ ನಿಷ್ಠುರವಾದ-ಗಭೀರ ಮುಖಭಾವವು, ಯಾರಿಗೂ ಇವನೊಡನೆ

ಅತಿಸಲಿಗೆಯಿಂದ ವರ್ತಿಸಲು ಅವಕಾಶಕೊಡುತ್ತಿರಲಿಲ್ಲ. ಈತ ಪ್ರತಿ ಭಾನುವಾರವೂ ತಪ್ಪದೆ ಚರ್ಚಿಗೆ ಹೋಗುತ್ತಿದ್ದ. ಹಬ್ಬದ ಕೂಟ ಮುಂತಾದುವುಗಳಿಗೂ ಹೋಗುತ್ತಿದ್ದ.

ಇವರೊಡನೆ ಇರುತ್ತ, ಹಡಗಿನ ಬಡಗಿಯ ಕಾರಾಗಾರದಲ್ಲೂ, ಇತರ ಹಲವು ಸಣ್ಣಪುಟ್ಟ ಕೆಲಸಗಳಲ್ಲೂ ಸಹಾಯಕನಾಗಿದ್ದ ಭಾರಿ ದೇಹದ ನಾವಿಕನ ಹೆಸರು ಜೋ ಎಂದು, ಕ್ರಮೇಣ ಇಲ್ಲಿನವರಿಗೆ ಗೊತ್ತಾಯಿತು. ತನ್ನ ಕೆಲಸಗಳ ಮಧ್ಯೆ ಇವನು, ಆಗಾಗ ಅವರ ದೋಣಿಯಲ್ಲಿ,ಅಕ್ಕಪಕ್ಕದ ದ್ವೀಪಗಳಿಗೆ ಹೊ ಗಿಬರುತ್ತಿದ್ದ. ಹೀಗೆಯೇ ಕೆಲವುಕಾಲ ತಳ್ಳಿದಮೇಲೆ, ಈ ಹೊಸ ಕುಟುಂಬದವರ ಸ್ಥಿತಿಗತಿಗಳು ಅಭಿವೃದ್ಧಿಗೆ ಬಂದವು. ಆಗ ಇವರು, ಒಂದು ಸ್ಕೂನರು ಕಟ್ಟುವ ಯೋಚನೆಮಾಡಿ, ತಂದೆ, ಮಗ ಮತ್ತು ನಾವಿಕ ಅವಿಶ್ರಾಂತವಾಗಿ ದುಡಿದು—ಹಡಗನ್ನು ಕಟ್ಟಿ ಮುಗಿಸಿದರು. ಹೆನ್ರಿ ಅದರ ನಾಯಕನಾದ; ಜೋ ಅವನ ಸಹಾಯಕನ ಹುದ್ದೆಯನ್ನು ಪಡೆದ. ದ್ವೀಪದ ಇಬ್ಬರು ಮೂವರು ಕಪ್ಪು ಜನರು ಅದರಲ್ಲಿನಾವಿಕರಾಗಿ ಸೇರಿಕೊಂಡರು. "**ಅವೆಂಜರ್**" ಎಂಬ ಸ್ವಲ್ಪ ವಿಚಿತ್ರವಾದ ಹೆಸರನ್ನು ಹೊತ್ತು, ಹಡಗು, ಸಮುದ್ರದ ಮೇಲೆ ಹೋಗತೊಡಗಿತು.

ಈ ನೌಕೆಯ ನಿರ್ಮಾಣದಿಂದ, ಈ ವರ್ತಕ ಕುಟುಂಬದ ಒಳ್ಳೆಯ ಅದೃಷ್ಟ, ಮೊಟ್ಟ ಮೊದಲಿಗೆ, ಒಂದು ದೊಡ್ಡ ಹೆಜ್ಜೆ ಮುಂದಿಟ್ಟಹಾಗಾಯಿತು. ವ್ಯಾಪಾರ ಆಶ್ಚರ್ಯಕರವಾಗಿ ಬೆಳೆಯಿತು. "**ಅವೆಂಜರು**" ಅಡಿಗಡಿಗೆ ಪ್ರಯಾಣಮಾಡುತ್ತ, ಸಲಸಲಕ್ಕೂ ವಿವಿಧವಾದ-ಹಾಗೂ ಬೆಲೆಬಾಳುವ ಸರಕುಗಳನ್ನು ಪಚ್ಚೆದ್ವೀಪಕ್ಕೆ ತರತೊಡಗಿತು. ಕಾಲಕ್ರಮದಲ್ಲಿ ವರ್ತಕ, ಚಿಕ್ಕದಾಗಿದ್ದ ತನ್ನ ಹಳೇ ಮಳಿಗೆಯನ್ನು ಕೆಡವಿ—ಅಲ್ಲಿ ಹೊಸದಾಗಿ ದೊಡ್ಡ ಮಳಿಗೆಯನ್ನು ಕಟ್ಟಿಕೊಂಡ. "**ಅವೆಂಜರ**"ನ್ನು ಮಾರಿ, ಅದಕ್ಕಿಂತ ದೊಡ್ಡದಾಗಿದ್ದ ಒಂದು ಹಡಗನ್ನು ಕೊಂಡುಕೊಂಡ. ಅದರ—ಸೊಗಸಾದ "**ಈವಿನಿಂಗ್ ಸ್ಟಾರ್**" ಅನ್ನುವ ಹೆಸರನ್ನು ಅಳಿಸಿ, ಆ ಸ್ಥಳದಲ್ಲಿ ಸ್ವಲ್ಪ ರಹಸ್ಯದಿಂದ ಕೂಡಿದ್ದ "**ಅವೆಂಜರ್**" ಅನ್ನೋ ಹೆಸರನ್ನು ಬರೆಸಿದ. ಒಟ್ಟಿನಲ್ಲಿ, ಎಲ್ಲ ವಿಧ

ದಲ್ಲೂ ಮಿ|| ಸ್ಟೂಯರ್ಟ್ ಸುಯೋಗದ ರಾಜಮಾರ್ಗದಲ್ಲಿ ನಡೆಯು ತ್ತಿದ್ದಂತೆ ತೋರುತ್ತಿತ್ತು.

ಆದರೆ ಇವರ ವಿಷಯವಾಗಿ, ಯಾರಿಗೂ ಊಹಿಸಲಾಗದ ಕೆಲವು ಗಭೀರ ರಹಸ್ಯಗಳಿದ್ದವು. ಆ ದ್ವೀಪದಲ್ಲೆಲ್ಲ ಮಿ|| ಸೂಯರ್ಟ್, ಬಹಳ ಐಶ್ವರ್ಯಂತನಾದ ಮನುಷ್ಯನೆಂದು, ಎಲ್ಲರಿಗೂ ತಿಳಿದ ವಿಷಯವಾಗಿತ್ತು. ಆದರೂ, ಈತನೂ ಈತನ ಕುಟುಂಬದವರೂ, ತಾವು ಈ ದ್ವೀಪಕ್ಕೆ ಬಂದ ಹೊಸದರಲ್ಲಿ ತಾತ್ಕಾಲಿಕವಾಗಿ ಕಟ್ಟಿಕೊಂಡಿದ್ದ, ಚಿಕ್ಕ-ಹಾಗೂ ಅಷ್ಟು ಸುಸಜ್ಜಿತವಲ್ಲದ ಬಡಕುಟೀರದಲ್ಲೇ ವಾಸಿಸುತ್ತಿದ್ದರು. ಇವರು, ದ್ವೀಪದ ಐಶ್ವರ್ಯವಂತರ ಹೆಂಡತಿಯರಿಗೂ--ಹೆಣ್ಣುಮಕ್ಕಳಿಗೂ ಭಾರಿ ಭಾರಿ ಬೆಲೆಬಾಳುವ ರೇಷ್ಮೆಬಟ್ಟೆಗಳನ್ನು ಮಾರುತ್ತಿದ್ದರೂ—ತಾವು ಮಾತ್ರ ಬಹಳ ಸಾಧಾರಣವಾದ ಅಗ್ಗದ ಬಟ್ಟೆ ಬರೆಗಳನ್ನೇ ಧರಿಸು ತ್ತಿದ್ದರು.

ಇನ್ನೊಂದು ವಿಶೇಷವೇನೆಂದರೆ, ಮಿ|| ಸೂಯರ್ಟ್, ವ್ಯಾಪಾರ ದಿಂದ ಬೇಕಾದಷ್ಟು ಹಣ ಸಂಪಾದಿಸುತ್ತಿದ್ದರೂ, ತಾನೂ—ಹಡಗು, ದೋಣಿ ಮುಂತಾದುವನ್ನು ಕಟ್ಟುವ ಕಸಬಿನಲ್ಲಿ, ಸಾಧಾರಣ ಕೂಲಿ ಯವನಂತೆ, ದೇಹಶ್ರಮಪಟ್ಟು ಕೈಯ್ಯಾರೆ ಕೆಲಸಮಾಡುವುದನ್ನು ಮಾತ್ರ ಬಿಟ್ಟಿರಲಿಲ್ಲ. ತನ್ನ ಈ ಕಸಬಿನಿಂದ ಸಂಪಾದಿಸಿದ ಹಣದ ಲೆಕ್ಕಗಳನ್ನೂ—ವ್ಯಾಪಾರದಿಂದ ಸಂಪಾದಿಸಿದ ದ್ರವ್ಯದ ಲೆಕ್ಕಗಳನ್ನೂ ಬೇರೆ ಬೇರೆ ಪುಸ್ತಕಗಳಲ್ಲಿ ಬರೆಸುತ್ತ ಇದ್ದ. ವ್ಯಾಪಾರದಿಂದ ಆಗು ತ್ತಿದ್ದ ಸಂಪಾದನೆಯೊಡನೆ ಹೋಲಿಸಿದರೆ—ನಾವೆಗಳ ನಿರ್ಮಾಣ— ರಿಪೇರಿ — ಇವುಗಳಿಂದ ಉತ್ಪತ್ತಿಯಾಗುತ್ತಿದ್ದುದು, ಅಜಗಜಾಂತ ರವಾಗಿದ್ದಿತು. ಆದರೂ ಈತ, ಸ್ವಲ್ಪವೂ ಪಾಲುಮಾರದೆ, ಕಾಲಹರಣ ಮಾಡದೆ ದುಡಿಯುತ್ತಿದ್ದುದರಿಂದ, ಇದರಲ್ಲೂ, ಉಳಿದ ಕೆಲಸಗಾರರಿ ಗಿಂತ ಹೆಚ್ಚಾಗಿಯೇ ಸಂಪಾದಿಸುತ್ತಿದ್ದ.

“**ಅವೆಂಜರಿ**”ನ ಸಮುದ್ರಯಾನಗಳು ಬರಬರುತ್ತ ವಿಸ್ತರಿಸಿ, ಅದು ದಕ್ಷಿಣ ಸಮುದ್ರದ ಮುಖ್ಯ ಮುಖ್ಯವಾದ ದ್ವೀಪಗಳಿಗೂ ಹೋಗಿ ವ್ಯಾಪಾರ ಮಾಡತೊಡಗಿತು. ಇಂಥ ಒಂದು ದ್ವೀಪದಿಂದ, ಹೆನ್ರಿ

ಒಮ್ಮೆ, ಒಂದು ಹೆಣ್ಣನ್ನು ಮದವೆಯಾಗಿ ಕರೆತಂದ; ಕಪ್ಪುಕೂದಲಿನ, ಸುಂದರವಾದ ಕಪ್ಪು ಕಣ್ಣುಗುಡ್ಡೆಗಳ—ಗಂಭೀರಾಕೃತಿಯ ಸುಂದರಿ. ಅವಳಿಗಾಗಿ, ತನ್ನ ತಂದೆಯ ಮನೆಯ ಸಮೀಪದಲ್ಲೇ ಇನ್ನೊಂದು ಕುಟೀರವನ್ನು ಕಟ್ಟಿದ.

ಮಿ|| ಸ್ಟೂಯರ್ಟ್‌ನ ಮುಖ್ಯ ಲೆಕ್ಕದ ಗುಮಾಸ್ತನಾಗಿದ್ದ ಕಾರಿ, ಕಾಗದಗಳನ್ನು ಬರೆಯುವುದರಲ್ಲಿ ಅಗ್ರಗಣ್ಯನಾಗಿದ್ದ. ಇವನು ಬರೆದಿಟ್ಟ ಕಾಗದಗಳನ್ನೆಲ್ಲ "**ಅವೆಂಜರು**" ದ್ವೀಪಕ್ಕೆ ಬಂದು ಪುನಃ ಹೋಗುವಾಗ,ಒಯ್ಯುತ್ತಿತ್ತು. ಒಂದು ಸಲ ಇವನು ಒಂದು ಕಾಗದಕ್ಕೆ, ವಿಳಾಸವನ್ನು ಬರೆದಿದ್ದಾಗ, ಅವಸರದಿಂದ ಅದನ್ನು ಅಲ್ಲೇ ಬಿಟ್ಟು-- ಏನೋ ಕೆಲಸಕ್ಕೆ ಎದ್ದು ಹೋಗಬೇಕಾಯಿತು. ಆಗ ಅವನ ಜೊತೆ ಗುಮಾಸ್ತ ಕುತೂಹಲದಿಂದ--ವಿಳಾಸವನ್ನು ನೋಡಿದ. ಆಮೇಲೆ ತನ್ನ ಜೊತೆಯವರಿಗೆಲ್ಲ, ಮಿ|| ಕಾರಿ, ಒಬ್ಬ ಹುಡುಗಿಯೊಡನೆ ಪತ್ರ ವ್ಯವಹಾರ ಮಾಡುತ್ತಿದ್ದನೆಂದೂ—ಅವಳ ಹೆಸರು ಮಿಸ್ ಅಲೀಸ್ ಮೇಸನ್—ಎಂದೂ ತಿಳಿಸಿಬಿಟ್ಟ.

ಮಿ|| ಕಾರಿ, ಸದಾ ಸಂತೋಷಚಿತ್ತನಾಗಿರುತ್ತಿದ್ದುದನ್ನು ನೋಡಿದರೆ, ಅವನ ಪ್ರಣಯ ನಿರಾತಂಕವಾಗಿ ನಡೆಯುತ್ತಿತ್ತೆಂದು ಊಹಿಸಬಹುದಾಗಿತ್ತು.

ವರ್ಷಗಳು ಕಳೆದವು. ವರ್ತಕನ ತಲೆಕೂದಲು ನರೆಯುತ್ತ ಬಂದವು. ಆದರೂ ಅವನ ಮೈಕಟ್ಟು—ನಡಗೆ ಸ್ವಲ್ಪವೂ ಕುಗ್ಗಿರಲಿಲ್ಲ. ದಿನ ಕಳೆದಂತೆಲ್ಲ—ಆತನ ಹೆಂಡತಿ, ಇನ್ನೂ ಎಳೇ ಪ್ರಾಯದವಳು-ಎನ್ನುವಂತೆ ತೋರುತ್ತಿದ್ದಳು. ವರ್ತಕನ ವ್ಯಾಪಾರ, ಅತ್ಯದ್ಭುತವಾಗಿ ಬೆಳೆದು, ಅಭಿವೃದ್ಧಿಯಾಯಿತು. ಇದು, ಪಚ್ಚೆ ದ್ವೀಪದ ನಿವಾಸಿಗಳಿಗೆ—ಎಂದೂ ಕಾಣದ--ವ್ಯಾಪಾರ ಚರಿತ್ರೆಯಲ್ಲೇ ಕೇಳದ—ಅಚ್ಚರಿಯಾಗಿತ್ತು.

ಇಷ್ಟಾದರೂ, ಧನಿಕನಾದ ವರ್ತಕ, ತನ್ನ ಬಡ ಕುಟೀರದಲ್ಲೇ ಇರುತ್ತ, ಕೈಯ್ಯಾರ—ಹಡಗು-ದೋಣಿಗಳ ನಿರ್ಮಾಣಕಾರ್ಯದಲ್ಲಿ ತೊಡಗುತ್ತ, ಕಾಲ ಕಳೆಯುತ್ತಿದ್ದ.

ಇವನ ಪಕ್ಕದ ಕುಟೀರದಲ್ಲಿ, ಸ್ವಲ್ಪ ಕಾಲದಲ್ಲೇ, ಮೂರು, ಮೈತುಂಬಿದ ಮಕ್ಕಳನ್ನು ನೋಡಬಹುದಾಗಿತ್ತು; ಅವರ ಕೇಕೆ—ಕೂಗು ನಲಿದಾಟಗಳನ್ನು ಕೇಳಬಹುದಾಗಿತ್ತು. ಇವುಗಳಲ್ಲಿ ಎರಡು ಗಂಡು, ಒಂದು ಹೆಣ್ಣು. ಗಂಡು ಮಕ್ಕಳಿಗೆ ಕ್ರಮವಾಗಿ ಗ್ಯಾಸ್ಕೋಯಿನ್ ಮತ್ತು ಹೆನ್ರಿ ಎಂದು ಹೆಸರಿಟ್ಟಿದ್ದರು; ಹೆಣ್ಣನ್ನು ಮೇರಿ ಎಂದು ಕರೆಯುತ್ತಿದ್ದರು. ನಮ್ಮ, ಸ್ವಲ್ಪ ವಿಲಕ್ಷಣ ಪ್ರಕೃತಿಯ ವರ್ತಕ, ಈ ಮೂರು ಮಕ್ಕಳನ್ನೂ ಬಹಳ ಮುದ್ದಿಸುತ್ತಿದ್ದನೆಂದು ಹೇಳಬೇಕಾಗಿಲ್ಲ.

ಈ ಕಾಲದಲ್ಲೆಲ್ಲ, ಇಂಗ್ಲೆಂಡ್ ದೇಶದ ಲಿವರ್‌ಪೂಲ್ ರೇವು ಪಟ್ಟಣದಲ್ಲಿ ಇದ್ದ ಒಂದು ವ್ಯಾಪಾರ ಸಂಸ್ಥೆ–ಕ್ರಮವಾದ ಅಂತರದಲ್ಲಿ–ಒಂದು ಅನಾಮಿಕ ಮೂಲದಿಂದ ಹಣವನ್ನು ಪಡೆಯುತ್ತಿತ್ತು. ಈ ಸಂಸ್ಥೆಯ ಕ್ಯಾಷಿಯರಿಗೆ,* ಹೀಗೆ ಕಾಣದ ಕೇಳದ ಸ್ಥಳದಿಂದ, ಯಾರಿಗೆ–ಏಕೆ ಎಂಬ ವಿವರಗಳೇನೂ ಇಲ್ಲದೆ–ಹಣ ಬರುತ್ತಿದ್ದುದನ್ನು ನೋಡಿ ಬಹಳ ಆಶ್ಚರ್ಯವಾಗುತ್ತಿತ್ತು. ಹೀಗೆ ಕಳಿಸಿದ ಹಣ, ಕಾಲಕ್ರಮದಲ್ಲಿ ಸಾವಿರಾರು ಪೌಂಡುಗಳ ಮೊತ್ತವಾಯಿತು. ಈ ವ್ಯಾಪಾರ ಸಂಸ್ಥೆ, ಕೆಲವು ವರ್ಷಗಳ ಹಿಂದೆ, ತನಗೆ ಸೇರಿದ್ದ "**ಬ್ರಿಲಿಯಂಟ್**" ಎಂಬ ಸೊಗಸಾದ ವ್ಯಾಪಾರ ನೌಕೆಯನ್ನು ಕಳೆದುಕೊಂಡಿತ್ತು. ಈ ಹಡಗು ಬೆಲೆಬಾಳುವ ಸರಕುಗಳನ್ನು ತುಂಬಿಕೊಂಡು, ವ್ಯಾಪಾರಕ್ಕಾಗಿ, ದಕ್ಷಿಣ ಸಮುದ್ರದ ದ್ವೀಪಗಳನ್ನು ಕುರಿತು ಹೊರಟಿತ್ತು. ನಡೆದ ಸಂಗತಿ ಏನೆಂದರೆ, ಗ್ಯಾಸ್ಕೋಯಿನ್ ತನ್ನ ಹಡಗನ್ನು ಬಿಟ್ಟು ಸ್ಯಾಂಡೀಕೊಲ್ಲಿ ಪಾಳಯಕ್ಕೆ ಒಮ್ಮೆ ಹೋಗಿದ್ದಾಗ, ಈ ಹಡಗು ತಾಳೀ ದ್ವೀಪದ ಕಡಲ್ಗಳ್ಳರ ಕೈಗೆ ಸಿಕ್ಕಿಬಿಟ್ಟಿತು.

ಲಿವರ್‌ಪೂಲ್ ವ್ಯಾಪಾರ ಸಂಸ್ಥೆಯ ಕ್ಯಾಷಿಯರು, ಹಡಗು ಕಳೆದು ಹೋಗಿದ್ದದ್ದರಿಂದ ಉಂಟಾದ ನಷ್ಟ, ಕಡೇ ಪೆನ್ನಿಯವರಿಗೂ ಎಷ್ಟು—ಎಂದು ತಿಳಿದುಕೊಂಡಿದ್ದ. ಏಕೆಂದರೆ, ಹಡಗು ಸರಕು ತುಂಬಿಕೊಂಡು ಹೊರಟಾಗ—ಸಾಮಾನು—ಬೆಲೆ, ಇವುಗಳ ಪಟ್ಟಿಯು

---

* Cashier ನಗದಿ ಗುಮಾಸ್ತ

ಪ್ರತಿ—ಒಂದನ್ನು ಹಡಗಿನೊಡನೆಯೇ ಕಳಿಸಿದ್ದ. ಅಲ್ಲದೆ, ಅದರ ವ್ಯಾಪಾರದಲ್ಲಿ ಇವನ ಭಾಗವೂ ಸ್ವಲ್ಪ ಇದ್ದದ್ದರಿಂದ, ಹಡಗು ಕಳೆದು ಹೋಗಿ ಉಂಟಾಗಿದ್ದ ನಷ್ಟವನ್ನು ಮರೆತಿರಲಿಲ್ಲ.

ಒಂದು ದಿನ, ಈ ಸಂಸ್ಥೆಗೆ ವಾಡಿಕೆಯಂತೆ ಅನಾಮಿಕನಿಂದ ಹಣ ಬಂತು. ಅದರ ಜೊತೆಯಲ್ಲೇ ಒಂದು ಕಾಗದವೂ ಇತ್ತು; ಅದರಲ್ಲಿ, "**ಬ್ರಿಲಿಯೆಂಟ್**—ಸಂಬಂಧವಾಗಿ ಇದೇ ಕಡೆಯ ಕಂತು. ಇದರೊಡನೆ, ಅದರ ಮಾಲೀಕರಿಗೆ, ಸರಕಿನ ಬೆಲೆಯೂ, ಆ ಬೆಲೆಯ ಮೇಲೆ ಚಕ್ರಬಡ್ಡಿಯೂ, ಮತ್ತು ನಷ್ಟವಾದ ಹಡಗಿನ ನ್ಯಾಯವಾದ ಅಂದಾಜು ಬೆಲೆಯೂ ವಾಪಸು ಸೇರಿದ ಹಾಗಾಯಿತು"—ಎಂದು ಬರೆದಿತ್ತು.

ದೊಡ್ಡ ಹೊಟ್ಟೆಯ ಕ್ಯಾಷಿಯರಿಗೆ ಸಿಡಿಲು ಬಡಿದ ಹಾಗಾಯಿತು! ಕೂಡಲೆ ಹೋಗಿ ತನ್ನ ಲೆಕ್ಕದ ಪುಸ್ತಕಗಳನ್ನು ತೆರೆದು—ಬಡ್ಡಿ ಗುಣಿಸಿ, ಕೂಡಿ, ನೋಡಿದ. ಎಲ್ಲ, ಪತ್ರದಲ್ಲಿ ನಮೂದಿಸಿದ್ದಂತೆ, ಕಡೇ ಪೆನ್ನಿಯವರೆಗೂ ಸರಿಯಾಗಿತ್ತು. ಅವನು ಅತ್ಯಾಶ್ಚರ್ಯದಿಂದ ಮನೆಗೆ ಹೋಗಿ—ಗಾಢವಾಗಿ ನಿದ್ದೆ ಮಾಡಿದ; ಎದ್ದಾಗಲೂ ಆಶ್ಚರ್ಯ! ಆಫೀಸಿಗೂ ಆಶ್ಚರ್ಯಪಡುತ್ತಲೇ ಹೋದ; ದಿನದಿನವೂ ಆಶ್ಚರ್ಯಪಡುತ್ತಲೇ ಕೆಲಸ ಮಾಡಿದ; ಗ್ರಹಿಸಲಸಾಧ್ಯವಾಗಿದ್ದ ಈ ವ್ಯವಹಾರದಿಂದ—ಅವನ ಆಶ್ಚರ್ಯ ಶಮನವಾಗುವ ಹಾಗೇ ಇರಲಿಲ್ಲ. ತನ್ನ ಉಳಿದ ಜೀವಮಾನವನ್ನೆಲ್ಲ ಆಶ್ಚರ್ಯಪಡುತ್ತಲೇ ಕಳೆದು, ಕೊನೆಗೆ—ಆಶ್ಚರ್ಯಪಡುತ್ತಲೇ ಸತ್ತುಹೋದ!

ಕಡೆಯ ಕಂತನ್ನು ಕಳಿಸಿದ ಮೇಲೆ ಒಂದು ದಿನ ಮಿ॥ ಸ್ಟ್ಯೂಯರ್ಟ್ ತನ್ನ ಕುಟೀರವನ್ನು ಪ್ರವೇಶಿಸಿ, ಹೆಂಡತಿಯನ್ನು ಕುರಿತು,

"ಮೇರೀ, ಈ ದಿನ ಕಡೆಯ ಕಂತನ್ನು ಕಳಿಸಿ, ಆ ನೀಚ ಕೆಲಸಕ್ಕೆ ತಕ್ಕ ಪರಿಹಾರವನ್ನು ಕೊಟ್ಟಿದ್ದೇನೆ. ಇದಕ್ಕೆ ಬೇಕಾದ ಸಾವಿರಾರು ಪೌಂಡುಗಳನ್ನು ಗಳಿಸಲು ನಾನು ಬಹುಕಾಲ—ಬಹಳ ಹೆಣಗಬೇಕಾಯಿತು; ಏಕೆಂದರೆ, ತಾಳೀ ದ್ವೀಪದ ಗವಿಗಳಲ್ಲಿಟ್ಟಿದ್ದ ಸರಕು

ಗಳಲ್ಲಿ ಕೆಲವು, ತೇವದಿಂದ ಕೆಟ್ಟು ಹೋಗಿದ್ದವು. ಆದರೆ ನನ್ನ ಇಂಜನಿಯರಿಂಗು ಮತ್ತು ಹಡಗು—ದೋಣಿ ಕೆಲಸದಿಂದ ಇಚೆಗೆ ಉತ್ಪತ್ತಿ ಹೆಚ್ಚಾಗಿದ್ದರಿಂದ, ಬಡ್ಡಿ ಸಮೇತ ಲೆಕ್ಕಾಚಾರ ಮಾಡಿ, ತೀರಿಸಿದ್ದೇನೆ. ಮೇರೀ, ಇನ್ನು ಇದಕ್ಕಿಂತ ಹೆಚ್ಚಾಗಿ ಏನನ್ನೂ ಮಾಡಲಾರೆ. ನನ್ನಿಂದ ನಷ್ಟ-ಕಷ್ಟ ಹೊಂದಿದವರು, ಇನ್ಯಾರಾದರೂ ಇರುವುದು ನನಗೆ ಗೊತ್ತಾದರೆ—ಅವರಿಗೆ ಒಂದಕ್ಕೆ ಹತ್ತರಷ್ಟು ಹಿಂತಿರುಗಿ ಕೊಡಬಲ್ಲೆ; ಆದರೆ ಅಂಥವರು ಯಾರನ್ನೂ ನಾನು ಕಾಣೆ. ಆದ್ದರಿಂದ, ಇನ್ನು ಮುಂದೆ ನಾನು, ಜನರ ಹಿತಕ್ಕಾಗಿ ವ್ಯಾಪಾರ, ಕಸಬು ಮಾಡುವುದು ಕರ್ತವ್ಯವಾಗಿದೆ. ನನ್ನ ಕೈಯಲ್ಲಿ ಸಾವಿರಾರು ಪೌಂಡುಗಳು ಓಡಾಡಿದ್ದರೂ-ನಾನು ಅದರಲ್ಲಿ ಒಂದು ಪೆನ್ನಿಯನ್ನೂ ಮುಟ್ಟಿಲ್ಲ—ನನ್ನ ಸ್ವಂತ ಕೈ ಕಸಬಿನ ಸಂಪಾದನೆಯನ್ನೂ—ದರೋಡೆ—ಲೂಟಿ ಮಾಡಿದ ಸರಕುಗಳ ವ್ಯಾಪಾರದಿಂದ ಬಂದ ಉತ್ಪತ್ತಿಯನ್ನೂ—ಪ್ರತ್ಯೇಕವಾಗಿಟ್ಟಿದ್ದೆನೆಂದು, ನೀನು ಬಲ್ಲೆ. ನನ್ನ ಸ್ವಂತ ಕೈ ಕಸಬಿನ ಸಂಪಾದನೆಯಿಂದಲೇ ಜೀವಿಸುತ್ತ—ನಿನ್ನನ್ನು ಕಾಪಾಡಿದ್ದೇನೆ. ದೇವರ ದಯದಿಂದ, ಈ ಸಂಪಾದನೆ ಬೇಕಾದ ಹಾಗೆ ಹೆಚ್ಚಿದೆ. ಈಗ ನಾವು, ಇನ್ನೂ ಚೆನ್ನಾದ, ಅನುಕೂಲವಾದ, ದೊಡ್ಡ ಮನೆಯೊಂದನ್ನು ಕಟ್ಟಿಕೊಳ್ಳಬಹುದು.

"ಇನ್ನು ವ್ಯಾಪಾರದ ವಿಚಾರ; ಅದು ಮುಂದುವರಿಯಲೇಬೇಕು. ಅದು ಚೆನ್ನಾಗಿ ಅಭಿವೃದ್ಧಿಯಾಗಿದೆ; ಮುಂದೂ ಅಭಿವೃದ್ಧಿಯಾಗುತ್ತದೆ. ಅದರಿಂದ ಅನೇಕ ಜನರ ಜೀವನ ನಡೆಯುತ್ತಿದೆ. ಇನ್ನು ಮುಂದೂ ನಾನೇ ಅದರ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತೇನೆ. ಆದರೆ ನಾನು ಬದುಕಿರುವವರೆಗೆ, ಅದರಿಂದ ಬರುವ ಲಾಭದ ಪ್ರತಿಯೊಂದು ಪೆನ್ನಿಯೂ ಧರ್ಮಕಾರ್ಯಗಳಿಗೆ ವಿನಿಯೋಗವಾಗಬೇಕು. ಅನಂತರ ಹೆನ್ರಿ, ಅದರ ವಿಷಯವಾಗಿ ತನಗೆ ತೋರಿದಂತೆ ಮಾಡಲಿ. ನಮ್ಮ ವ್ಯಾಪಾರವನ್ನು ಬೆಳಸಿ ಇಷ್ಟು ಅಭಿವೃದ್ಧಿಗೆ ತರಲು ಅವನೂ ಬೇಕಾದಷ್ಟು ದುಡಿದಿದ್ದಾನೆ; ಆದ್ದರಿಂದ, ಅವನು ತನ್ನ ಶ್ರಮದ ಫಲವನ್ನು ಅನುಭವಿಸುವುದು ತಕ್ಕದ್ದಾಗಿಯೇ ಇದೆ. ನನ್ನ ಮಾತುಗಳನ್ನು ನೀನು ಒಪ್ಪುತ್ತೀಯೋ ಇಲ್ಲವೋ, ಮೇರಿ?"—ಎಂದು ಕೇಳಿದ.

ಮೇರಿ ಸಂಪೂರ್ಣವಾಗಿ ಸಮ್ಮತಿಸಿದಳೆಂದು ಪ್ರತ್ಯೇಕವಾಗಿ ಹೇಳಬೇಕಾಗೇ ಇಲ್ಲ

ಈ ಮಾತು ನಡೆದ ಕೂಡಲೆ, ಮಿ|| ಕಾರಿ, **ಅವೆಂಜರಿನ ಮೇಲೆ**, ಬಹಳ ದೀರ್ಘವಾದ ಸಮುದ್ರಯಾನ ಹೊರಟ. ಹಡಗು ಉತ್ತರ ಅಮೆರಿಕಾಖಂಡದ ಸ್ಯಾನ್ ಫ್ರಾನ್ಸಿಸ್ಕೋ ರೇವು ಪಟ್ಟಣಕ್ಕೆ ಹೋಯಿತು. ಇಲ್ಲಿ ಜೋ ಬಂಪಸ್, ಲಕ್ಷಣವಾದ ಹೆಂಗಸಾಗಿದ್ದ, ಸುಸಾನ್ ಎಂಬ ತನ್ನ ಹಳೆಯ ಸ್ನೇಹಿತೆಯೊಬ್ಬಳನ್ನು ಪುನಃ ಭೇಟಿಯಾದ. ಈ ಭೇಟಿಯ ಪರಿಣಾಮವಾಗಿ, **ಅವೆಂಜರು** ಅಲ್ಲಿಂದ ಹೊರಟಾಗ, ಈ ಹೆಣ್ಣು ಆ ಹಡಗನ್ನು ಹತ್ತಿ, ಪಚ್ಚೆ ದ್ವೀಪಕ್ಕೆ ಹೊರಟಳು.

ಹಡಗು ವಾಪಸು ಬರುತ್ತ ಮಾರ್ಗದಲ್ಲಿ, ದಕ್ಷಿಣಸಾಗರ ದ್ವೀಪಗಳಲ್ಲಿ ತನಗೆ ಮೊಟ್ಟಮೊದಲು ಕಾಣಿಸಿದ ದ್ವೀಪಕ್ಕೆ ಹೋಯಿತು. ಇಲ್ಲಿ ಕಾರೀಗೂ, ಓಲ್‌ಥಾರ್‌ವಲ್ಡ್-ಎಂಬ ಸರಳ ಹೃದಯದ ವಿಶ್ವಾಸಿಯಾದ ವೃದ್ಧನಿಗೂ, ಮತ್ತು, ಸುವರ್ಣಕೇಶಿಯೂ, ನೈದಿಲೆವರ್ಣದ ಅಗಲವಾದ ಕಣ್ಣುಗಳುಳ್ಳವಳೂ, ಮಧುರಾಕೃತಿಯವಳೂ ಆದ ಅಲೀಸ್ ಮೇಸನ್ ಎಂಬ ಬಾಲೆಗೂ ಮಧ್ಯೆ ನಡೆದ ಸಂತೋಷ—ಸುಮ್ಮಾನದ ದೃಶ್ಯಗಳು ಅತ್ಯಪೂರ್ವವಾಗಿದ್ದವು !

ಆಶ್ಚರ್ಯವೇನೆಂದರೆ, ಈ ಸುಂದರಿಯಾದ ಬಾಲೆ **ಅವೆಂಜರಿನ** ಮೇಲೆ ಪ್ರಯಾಣಿಕಳಾಗಲು ಒಪ್ಪಿದಳು; ಇನ್ನೂ ಆಶ್ಚರ್ಯವೇನೆಂದರೆ, ಅವಳ ತಂದೆಯೂ, ಓಲ್‌ಥಾರ್‌ವಲ್ಡೂ ಅವಳ ಜೊತೆಯಲ್ಲಿ ಪ್ರಯಾಣ ಮಾಡಲು ಒಪ್ಪಿದರು. ಇವರ ಜೊತೆಯಲ್ಲಿ ಪೂಪಿ ಎಂಬ ಒಬ್ಬ ಕಪ್ಪು ಹೆಂಗಸೂ ಹೊರಟಳು.

ಪಚ್ಚೆ ದ್ವೀಪವನ್ನು ತಲುಪಿದ ಮೇಲೆ, ಕಾರಿ—ಅಲೀಸರಿಗೆ ಮದುವೆಯಾಯಿತು. ಅದೇ ದಿನ ಬಂಪಸ್ ಸುಸಾನಳನ್ನು ಮದುವೆಯಾದ. ಆ ದಿನ ವಿಶೇಷ ಆನಂದೋತ್ಸವವಾಯಿತು.

ವರ್ಷಗಳು ಉರುಳಿ ಹೋದವು. ಗ್ಯಾಸ್ಕೋಯಿನಿನ ತಲೆ ಕೂದಲು ಬೆಳ್ಳಿಯ ಹಾಗೆ ಬೆಳ್ಳಗಾಯಿತು. ಆದರೆ ಅವನ ಉನ್ನತವಾದ ಧೀರವಾದ ಮೈಕಟ್ಟನ್ನು ಕುಗ್ಗಿಸುವುದಕ್ಕಾಗಲಿ, ಅವನ ಗಭೀರ

ವಾದ ಗುಡುಗು ದನಿಯು ಸುಶ್ರಾವ್ಯನಾದವನ್ನು ಅಡಗಿಸುವುದಕ್ಕಾಗಲಿ, ಕಾಲಪುರುಷನು ಅಶಕ್ತನಾಗಿದ್ದಂತೆ ತೋರುತ್ತಿತ್ತು. ಆವನು ಹಲವು ಮೊಮ್ಮಕ್ಕಳ, ಮತ್ತು ಹಕ್ಕು ಇರಲಿ—ಇಲ್ಲದೆ ಇರಲಿ, ಅವನನ್ನು "ತಾತ" ಎಂದು ಕರೆಯುತ್ತಿದ್ದ, ಇತರ ಹುಡುಗರು ಮಕ್ಕಳ ಪ್ರಿಯ ಮೂರ್ತಿಯಾಗಿದ್ದ.

ಅವನ ಭಾರಿ ದೇಹದ ಸುತ್ತ ಮುತ್ತಿಕೊಂಡು, ಆವನ ಭುಜ ತೊಡೆಗಳ ಮೇಲೆ ಅಡರಿ, ಅವನು ಹೇಳುತ್ತಿದ್ದ ವಿಚಿತ್ರವಾದ ಸಮುದ್ರದ ಸಾಹಸ ಕಥೆಗಳನ್ನು-ಬಿಡುಗಣ್ಣಾಗಿ—ಉಸಿರುಹಿಡಿದು—ಏಕಾಗ್ರತೆಯಿಂದ ಕೇಳುತ್ತಿದ್ದ ಈ ಸರಳ ಬಾಲಕ ಬಾಲಕಿಯರು, ತಮ್ಮ "ತಾತ" ನೇ, ಒಂದಾನೊಂದು ಕಾಲದಲ್ಲಿ—ಅತಿಭಯಂಕರನೆಂದು ಪ್ರಖ್ಯಾತನಾಗಿದ್ದ ಕಡಲ್ಗಳ್ಳ ಡರ್‌ವರ್ಡ್—ಎಂದು ಸ್ವಲ್ಪವೂ ಅರಿತಿರಲಿಲ್ಲ !

ಈ ವೃದ್ಧ, ದ್ವೀಪವ ಸಾರ್ವಜನಿಕ ವಿಚಾರಗಳಲ್ಲಿ ಯಾವ ಮುಖ್ಯ ಪಾತ್ರವನ್ನೂ ವಹಿಸದೆ, ಮಿಶನರಿಯ ಭಾನುವಾರದ ಶಾಲೆಗಳಲ್ಲಿ, ಹುಡುಗ ಹುಡುಗಿಯರಿಗೆ ಪಾಠ ಹೇಳುವ ಕೆಲಸವನ್ನು ಮಾತ್ರ ಆಸಕ್ತಿಯಿಂದ ಮಾಡುತ್ತಿದ್ದ. ಅವರಿಗೆ ಸದಾ, ಪಾಪದ ಘೋರ ಅಪಾಯಗಳನ್ನೂ—ಪುಣ್ಯ—ಪ್ರೀತಿಗಳ ಸವಿ ಸೌಂದರ್ಯಗಳನ್ನೂ ಭೋಧಿಸುತ್ತ ಕಾಲಕಳೆಯುತ್ತಿದ್ದ.

---

*